ಗೋಮೂತ್ರೇ ಆದಿತ್ಯಾಯ ನಮಃ । ಭೂಃ ಆದಿತ್ಯಮಾವಾಹಯಾಮಿ । ಭುವಃ ಆದಿತ್ಯಮಾವಾಹಯಾಮಿ । ಸ್ವಃ ಆದಿತ್ಯಮಾವಾಹಯಾಮಿ । ಭೂರ್ಭುವಃಸ್ವಃ ಆದಿತ್ಯಮಾವಾಹಯಾಮಿ । ಆದಿತ್ಯಾಯ ನಮಃ । ಸ್ಥಾಪಯಾಮಿ ಪೂಜಯಾಮಿ ॥ ಗೋಮಯೇ ವಾಯವೇ ನಮಃ । ಭೂಃ ವಾಯುಮಾವಾಹಯಾಮಿ । ......ವಾಯವೇ ನಮಃ । ಸ್ಥಾಪಯಾಮಿ ಪೂಜಯಾಮಿ ॥ ಕ್ಷೀರೇ ಸೋಮಾಯ ನಮಃ । ಭೂಃ ಸೋಮಮಾವಾಹಯಾಮಿ । ........ಸೋಮಾಯ ನಮಃ । ಸ್ಥಾಪಯಾಮಿ ಪೂಜಯಾಮಿ ॥ ದಧನಿ ಶುಕ್ರಾಯ ನಮಃ । ಭೂಃ ಶುಕ್ರಮಾವಾಹಯಾಮಿ । .......ಶುಕ್ರಾಯ ನಮಃ । ಸ್ಥಾಪಯಾಮಿ ಪೂಜಯಾಮಿ ॥ ಆಜ್ಯೇ ಅಗ್ನಯೇ ನಮಃ । ಭೂರಗ್ನಿಮಾವಾಹಯಾಮಿ । .......ಅಗ್ನಯೇ ನಮಃ । ಸ್ಥಾಪಯಾಮಿ ಪೂಜಯಾಮಿ ॥ ಕುಶೋದಕೇ ಗಂಧರ್ವಾಯ ನಮಃ । ಭೂಃ ಗಂಧರ್ವಮಾವಾಹಯಾಮಿ । ......ಗಂಧರ್ವಾಯ ನಮಃ । ಸ್ಥಾಪಯಾಮಿ ಪೂಜಯಾಮಿ ॥

## ಪಂಚಗವ್ಯಮೇಲನಮ್

(ವಕ್ಷ್ಯಮಾಣಮಂತ್ರೈಃ ಪಂಚಗವ್ಯಮೇಲನಂ ಕುರ್ಯಾತ್ ॥)

ತತ್ಸವಿತುಃ ಗಾಧಿನೋ ವಿಶ್ವಾಮಿತ್ರಋಷಿಃ । ಗಾಯತ್ರೀಛಂದಃ । ಸವಿತಾದೇವತಾ । ಗೋಮೂತ್ರಪೂರಣೇ ವಿನಿಯೋಗಃ ॥

**ಓಂ ತತ್ ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥**

ಗಂಧದ್ವಾರಾಂ ಚಿಕ್ಲೀತಃಋಷಿಃ । ಅನುಷ್ಟುಪ್‌ಛಂದಃ । ಇಂದಿರಾದೇವತಾ । ಗೋಮಯಪೂರಣೇ ವಿನಿಯೋಗಃ ॥

**ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪ ಹ್ವಯೇ ಶ್ರಿಯಮ್ ॥**

ಆ ಪ್ಯಾಯಸ್ವ ಗೌತಮೋ ರಾಹೂಗಣಋಷಿಃ । ಗಾಯತ್ರೀಛಂದಃ । ಪವಮಾನಃ ಸೋಮೋ ದೇವತಾ । ಕ್ಷೀರಪೂರಣೇ ವಿನಿಯೋಗಃ ॥

**ಓಮ್ ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಮ್ । ಭವಾ ವಾಜಸ್ಯ ಸಂಗಥೇ ॥**

ದಧಿಕ್ರಾವ್ಣೋ ಗೌತಮೋವಾಮದೇವಋಷಿಃ । ಅನುಷ್ಟುಪ್‌ಛಂದಃ । ದಧಿಕ್ರಾದೇವತಾ । ದಧಿಪೂರಣೇ ವಿನಿಯೋಗಃ ॥

**ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿ ನೋ ಮುಖಾ ಕರತ್ ಪ್ರ ಣ ಆಯೂಂಷಿ ತಾರಿಷತ್ ॥**

**ಓಂ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ ವಃ ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಃ ಸೂರ್ಯಸ್ಯ ರಶ್ಮಿಭಿಃ ॥**

(ಅಥವಾ) ಘೃತಂ ಮಿಮಿಕ್ಷೇ ಶೌನಕೋ ಗೃತ್ಸಮದಋಷಿಃ । ತ್ರಿಷ್ಟುಪ್‌ಛಂದಃ । ಸ್ವಾಹಾಕೃತಯಃದೇವತಾಃ । ಘೃತಪೂರಣೇ ವಿನಿಯೋಗಃ ॥

**ಓಂ ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯ ಧಾಮ । ಅನುಷ್ವಧಮಾವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಮ್ ॥**

**ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮ್ ॥**

(ಇತಿ ಕುಶೋದಕಂ ಚ ಕಲಶೇ ಪೂರಯೇತ್ ॥)

(ಸಪ್ತದರ್ಭಕೃತಬ್ರಹ್ಮಕೂರ್ಚೇನ ಪಾಲಾಶಸಮಿಧಾ ಚ ಪ್ರಣವೇನ ಆಪೋಹಿಷ್ಠೇತಿ ಮಂತ್ರೈಃ ಮಂಥತಾನರೇತಿ-ಮಂತ್ರೇಣ, ಮಾನಸ್ತೋಕೇತಿ ಮಂತ್ರೇಣ ಪಂಚಬ್ರಹ್ಮಭಿಶ್ಚ (ಸದ್ಯೋಜಾತಾದಿ ಪಂಚಮಂತ್ರೈಃ) ಆಲೋಡ್ಯ ತತ್ರ ಪಂಚಗವ್ಯೇ ವಿಷ್ಣ್ವಾದಿದೇವತಾಃ ಆವಾಹಯೇತ್ ॥)

ಮಂಥತಾ ನರೋ ಗಾಧಿನೋ ವಿಶ್ವಾಮಿತ್ರಋಷಿಃ । ತ್ರಿಷ್ಟುಪ್‌ಛಂದಃ । ಅಗ್ನಿರ್ದೇವತಾ । ಪಂಚಗವ್ಯಮಥನೇ ವಿನಿಯೋಗಃ ॥

**ಓಂ ಮಂಥತಾ ನರಃ ಕವಿಮದ್ವಯಂತಂ ಪ್ರಚೇತಸಮಮೃತಂ ಸುಪ್ರತೀಕಮ್ । ಯಜ್ಞಸ್ಯ ಕೇತುಂ ಪ್ರಥಮಂ ಪುರಸ್ತಾದಗ್ನಿಂ ನರೋ ಜನಯತಾ ಸುಶೇವಮ್ ॥**

**ಓಂ ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ । ಭವೇಽಭವೇ ನಾತಿಭವೇ ಭವಸ್ವ ಮಾಂ ಭವೋದ್ಭವಾಯ ನಮಃ ॥**

**ಓಂ ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ॥**

**ಓಮ್ ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರತರೇಭ್ಯಃ । ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ ॥**

**ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ ॥**

**ಓಮ್ ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ**

**ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಮ್ ॥**

**ಆವಾಹನಮಂತ್ರಃ**

ಇರಾವತೀ ವಸಿಷ್ಠಋಷಿಃ । ತ್ರಿಷ್ಟುಪ್ಛಂದಃ । ವಿಷ್ಣುರ್ದೇವತಾ । ಪಂಚಗವ್ಯಮಧ್ಯೇ ವಿಷ್ಣ್ವಾವಾಹನೇ ವಿನಿಯೋಗಃ ॥

**ಓಮ್ ಇರಾವತೀ ಧೇನುಮತೀ ಹಿ ಭೂತಂ ಸೂಯವಸಿನೀ ಮನುಷೇ ದಶಸ್ಯಾ । ವ್ಯಸ್ತಭ್ನಾ ರೋದಸೀ ವಿಷ್ಣವೇತೇ ದಾಧರ್ಥ ಪೃಥಿವೀಮಭಿತೋ ಮಯೂಖೈಃ ॥**

ಇದಂ ವಿಷ್ಣುರ್ಮೇಧಾತಿಥಿಋಷಿಃ । ಗಾಯತ್ರೀಛಂದಃ । ವಿಷ್ಣುರ್ದೇವತಾ । ಪೂರ್ವವತ್ ವಿನಿಯೋಗಃ ॥

**ಓಮ್ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಮ್ । ಸಮೂಢಮಸ್ಯ ಪಾಂಸುರೇ ॥**

ವಿಷ್ಣವೇ ನಮಃ । ಭೂಃ ವಿಷ್ಣುಮಾವಾಹಯಾಮಿ । ಭುವಃ ವಿಷ್ಣುಮಾವಾಹಯಾಮಿ । ಸ್ವಃ ವಿಷ್ಣುಮಾವಾಹಯಾಮಿ । ಭೂರ್ಭುವಃಸ್ವಃ ವಿಷ್ಣುಮಾವಾಹಯಾಮಿ । ಸ್ಥಾಪಯಾಮಿ । ಪೂಜಯಾಮಿ ॥

ಮಾ ನೋ ಮಹಾಂತಮಿತಿ ಕುತ್ಸಋಷಿಃ । ಜಗತೀಛಂದಃ । ರುದ್ರೋದೇವತಾ। ಪಂಚಗವ್ಯಮಧ್ಯೇ ರುದ್ರಾವಾಹನೇ ವಿನಿಯೋಗಃ ॥

**ಓಂ ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಮ್ । ಮಾ ನೋ ವಧೀಃ ಪಿತರಂ ಮೋತ ಮಾತರಂ ಮಾ ನಃ ಪ್ರಿಯಾಸ್ತನ್ವೋ ರುದ್ರ ರೀರಿಷಃ ॥**

ಮಾ ನಸ್ತೋಕೇತಿ ಕುತ್ಸಋಷಿಃ । ಜಗತೀಛಂದಃ । ರುದ್ರೋದೇವತಾ । ಪೂರ್ವವತ್ ವಿನಿಯೋಗಃ ॥

**ಓಂ ಮಾ ನಸ್ತೋಕೇ ತನಯೇ ಮಾ ನ ಆಯೌ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತಃ ಸದಮಿತ್ ತ್ವಾ ಹವಾಮಹೇ ॥**

ರುದ್ರಾಯ ನಮಃ । ಭೂಃ ರುದ್ರಮಿತ್ಯಾದಿ ॥

ಬ್ರಹ್ಮ ಜಜ್ಞಾನಂ ನಕುಲಋಷಿಃ । ತ್ರಿಷ್ಟುಪ್ಛಂದಃ । ಬ್ರಹ್ಮಾದೇವತಾ । ಪಂಚಗವ್ಯಮಧ್ಯೇ ಬ್ರಹ್ಮಾವಾಹನೇ ವಿನಿಯೋಗಃ ॥

**ಓಂ ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿ ಸೀಮತಃ ಸುರುಚೋ ವೇನ ಆವಃ । ಸ ಬುಧ್ನಿಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿವಃ ॥**

**ಬ್ರಹ್ಮಣೇ ನಮಃ । ಭೂಃ ಬ್ರಹ್ಮಾಣಮಿತ್ಯಾದಿ ॥**

ಅಗ್ನ ಆಯೂಂಷಿ ಶತಂ ವೈಖಾನಸಾಋಷಯಃ । ಗಾಯತ್ರೀಛಂದಃ । ಅಗ್ನಿಃ ಪವಮಾನೋದೇವತಾ । ಪಂಚಗವ್ಯಮಧ್ಯೇ ಅಗ್ನ್ಯಾವಾಹನೇ ವಿನಿಯೋಗಃ ॥

**ಓಮ್ ಅಗ್ನ ಆಯೂಂಷಿ ಪವಸ ಆ ಸುವೋರ್ಜಮಿಷಂ ಚ ನಃ । ಆರೇ ಬಾಧಸ್ವ ದುಚ್ಛುನಾಮ್ ॥**

**ಅಗ್ನಯೇ ನಮಃ । ಭೂಃ ಅಗ್ನಿಮಿತ್ಯಾದಿ ॥**

ಆ ಪ್ಯಾಯಸ್ವ ಗೌತಮಋಷಿಃ । ಗಾಯತ್ರೀಛಂದಃ । ಸೋಮೋದೇವತಾ । ಪಂಚಗವ್ಯಮಧ್ಯೇ ಸೋಮಾವಾಹನೇ ವಿನಿಯೋಗಃ ॥

**ಓಮ್ ಆ ಪ್ಯಾಯಸ್ವ ಸಮೇತು......... ವಾಜಸ್ಯ ಸಂಗಥೇ ॥**

**ಸೋಮಾಯ ನಮಃ । ಭೂಃ ಸೋಮಮಿತ್ಯಾದಿ ॥**

ತತ್ಸವಿತುರ್ಗಾಧಿನೋ ವಿಶ್ವಾಮಿತ್ರಋಷಿಃ । ಗಾಯತ್ರೀಛಂದಃ । ಸವಿತಾದೇವತಾ । ಪಂಚಗವ್ಯಮಧ್ಯೇ ಸವಿತ್ರಾವಾಹನೇ ವಿನಿಯೋಗಃ ॥

**ಓಂ ತತ್ ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥**

**ಸವಿತ್ರೇ ನಮಃ । ಭೂಃ ಸವಿತಾರಮಿತ್ಯಾದಿ ॥**

ಪ್ರಜಾಪತೇ ಹಿರಣ್ಯಗರ್ಭಋಷಿಃ । ತ್ರಿಷ್ಟುಪ್‌ಛಂದಃ । ಪ್ರಜಾಪತಿರ್ದೇವತಾ । ಪಂಚಗವ್ಯಮಧ್ಯೇ ಪ್ರಜಾಪತ್ಯಾವಾಹನೇ ವಿನಿಯೋಗಃ ॥

**ಓಂ ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ । ಯತ್ ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಮ್ ॥**

**ಪ್ರಜಾಪತಯೇ ನಮಃ । ಭೂಃ ಪ್ರಜಾಪತಿಮಿತ್ಯಾದಿ ॥**

(ಆವಾಹ್ಯ ಕಲಶಂ ಸ್ಪೃಷ್ಟ್ವಾ ಶತವಾರಂ ಗಾಯತ್ರೀಮಂತ್ರಂ ಜಪ್ತ್ವಾ ಷೋಡಶೋಪಚಾರಪೂಜಾಂ ಕೃತ್ವಾ ಮೇಲನಮಾತ್ರಪಕ್ಷೇ ಆವಾಹಿತದೇವತಾ ಉದ್ವಾಸ್ಯ ಕೃಷ್ಣಾರ್ಪಣಂ ಕೃತ್ವಾ,

**ಯತ್ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ (ತಾವಕೇ) ।**
**ಪ್ರಾಶನಂ ಪಂಚಗವ್ಯಸ್ಯ ದಹತ್ವಗ್ನಿರಿವೇಂಧನಮ್ ॥**

'ಓಂ' ಇತಿ ಮಂತ್ರೇಣ ಪಲಾಶಪತ್ರೇಣ ಪಂಚಗವ್ಯಪ್ರಾಶನಂ ಕುರ್ಯಾತ್ ॥)

॥ ಇತಿ ಪಂಚಗವ್ಯಮೇಲನಂ ಸಂಪೂರ್ಣಮ್ ॥

# ॥ ಯಜ್ಞೋಪವೀತಧಾರಣಮ್ ॥

## ಉಪೋದ್ಘಾತ

ಉಪವೀತಧಾರಣ ಮಾಡುವವರು ಅದನ್ನು ಧಾರಣಮಾಡುವ ಉದ್ದೇಶವೇನು, ಅದು ಹೇಗಿರತಕ್ಕದ್ದು –ಇವೇ ಮೊದಲಾದ ವಿಷಯಗಳನ್ನು ತಕ್ಕಮಟ್ಟಿಗಾದರೂ ತಿಳಿದಿರುವುದು ಅಗತ್ಯ. ಬ್ರಾಹ್ಮಣನಿಗೆ ಆಗಬೇಕಾದ ಸಂಸ್ಕಾರಗಳಲ್ಲಿ ಉಪನಯನಸಂಸ್ಕಾರವೇ ಮುಖ್ಯವಾದುದು. ಈ ಉಪನಯನವಾದನಂತರ ಬ್ರಾಹ್ಮಣನು ತನ್ನ ವರ್ಣಾಶ್ರಮಕ್ಕೆ ವಿಧಿಸಿರುವ ಧರ್ಮಾಚರಣೆಗಳಿಗೆ ಸರಿಯಾಗಿಯೇ ನಡೆಯಬೇಕಲ್ಲದೆ, ಮನೋ-ವಾಕ್ಕಾಯಕರ್ಮಗಳಲ್ಲಿ ಮನಬಂದಂತೆ ವರ್ತಿಸದೆ ವಿಧಿಬದ್ಧನಾಗಿರತಕ್ಕದ್ದೆಂಬುದನ್ನು ಸದಾ ಜ್ಞಾಪಕದಲ್ಲಿಟ್ಟುಕೊಳ್ಳುವುದಕ್ಕೆ ಮಹಾತ್ಮರು ಕಲ್ಪಿಸಿದ ಒಂದು ಚಿಹ್ನೆ ಈ ಉಪವೀತವಾಗಿದೆ.

ಈ ವಿಶ್ವವು ತ್ರಿಗುಣ, ತ್ರಿಕಾಲ, ತ್ರ್ಯವಸ್ಥಾ, ತ್ರಿಲೋಕ, ತ್ರಿಮೂರ್ತಿ, ತ್ರಿವರ್ಗ, ಸೃಷ್ಟಿ–ಸ್ಥಿತಿ–ಲಯ ಇತ್ಯಾದಿ ತ್ರ್ಯಾತ್ಮಕವಾಗಿರುವುದನ್ನು ಉಪವೀತದ ಮೂರು ಎಳೆಗಳು ಸೂಚಿಸುತ್ತವೆ.

**ಕಾರ್ಪಾಸಂ ಚೋಪವೀತಂ ಸರ್ವೇಷಾಮಿತಿ** –ಎಂಬ ಸ್ಮೃತಿವಾಕ್ಯ ಪ್ರಕಾರ ಬ್ರಾಹ್ಮಣರು ಸತ್ವಗುಣದ ದ್ಯೋತಕವಾಗಿ ಹತ್ತಿಯಿಂದ ಮಾಡಿದ ಬಿಳುಪಾಗಿರುವ, ಕ್ಷತ್ರಿಯರು ರಜೋಗುಣದ್ಯೋತಕವಾಗಿ ಕೆಂಪುಬಣ್ಣದ, ವೈಶ್ಯನು ತಮೋಗುಣದ ದ್ಯೋತಕವಾಗಿ ಹಳದಿಬಣ್ಣದ ಯಜ್ಞೋಪವೀತವನ್ನು ಧರಿಸಬೇಕೆಂದು ನಿಯಮವಿರುತ್ತದೆ. ಕನ್ಯೆಯು ಅಥವಾ ಬ್ರಾಹ್ಮಣನು ಶುದ್ಧವಾದ ಹತ್ತಿಯಿಂದ ನೂಲನ್ನು ಎಳೆಯಬೇಕು.

**ಕಾರ್ಪಾಸಮುಪವೀತಂ ಸ್ಯಾತ್ ವಿಪ್ರಸ್ಯೋರ್ಧ್ವ ವೃತಂ ತ್ರಿವೃತ್ ।**
**ತ್ರಿರಾವೇಷ್ಟ್ಯ ದೃಢಂ ಬದ್ಧ್ವಾ ಹರಿಬ್ರಹ್ಮೇಶ್ವರಾನ್ನಮೇತ್ ॥**

ಪೂರ್ವಾಭಿಮುಖವಾಗಿ ದೇವರ ನಾಮಸಂಕೀರ್ತನೆ ಮಾಡುತ್ತ ದರ್ಭಾಸನದಲ್ಲಿ ಕುಳಿತುಕೊಂಡು ಶುದ್ಧವಾದ ಹತ್ತಿಯಿಂದ ನೂಲನ್ನು ಎಳೆದು, ಪ್ರಣವಸಹಿತವಾಗಿ ಪುರುಷಸೂಕ್ತವನ್ನು ಹೇಳುತ್ತ ತನ್ನ ನಾಲ್ಕು ಮುಂಬೆರಳುಗಳಿಗೆ ೯೬ ಸಲ ಸುತ್ತಿದಾಗ ಷಣ್ಣವತ್ಯಂಗುಲವಾಗುವುದು (೯೬ ಅಂಗುಲ). ಆ ನೂಲನ್ನು ಮೂರಾಗಿ ಜೋಡಿಸಿ ಅದನ್ನು ಮತ್ತೆ ಪುನಃ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವ ವೇದಗಳ ಸೂಕ್ತಗಳನ್ನು ಜಪಿಸುತ್ತ ಮೂರಾಗಿ ಜೋಡಿಸಿ ರಾಟೆಯಿಂದ ಚೆನ್ನಾಗಿ ತಿರುಗಿಸಬೇಕು. ಆಗ ಆ ನೂಲಿನಲ್ಲಿ ಒಟ್ಟಿಗೆ ಒಂಬತ್ತು ನೂಲು ಸೇರುವುದು. ಈ ನೂಲನ್ನು ಮತ್ತೆ ಪುನಃ ವಿಷ್ಣು, ಬ್ರಹ್ಮ, ರುದ್ರ ಸೂಕ್ತಾದಿಗಳನ್ನು ಜಪಿಸುತ್ತ ಮೂರು ಎಳೆಗಳಾಗಿ ತಂದು ಎರಡು ಕುಚ್ಚಿಯನ್ನು ಜೋಡಿಸಿ ಪವಿತ್ರಗ್ರಂಥಿ(ಗಂಟು) ಹಾಕಿ ಅನಂತರ ಬ್ರಹ್ಮಗಂಟನ್ನು ಹಾಕಬೇಕು. ಯಜ್ಞೋಪವೀತಧಾರಣ ಮಾಡುವ ಮೊದಲು ಆಪೋಹಿಷ್ಠಾದಿ ಮಂತ್ರಗಳಿಂದ ಪ್ರೋಕ್ಷಿಸಿ, ಶುದ್ಧಗೊಳಿಸಿ, ದೇವರಿಗೆ ಸಮರ್ಪಿಸಿ, ಗಾಯತ್ರೀಮಂತ್ರವನ್ನು ಅಭಿಮಂತ್ರಿಸಿ ಸಂಸ್ಕಾರ (ಭಿನ್ನತಂತುವಾಗಿದ್ದಾಗಲೂ ಸೂತಕಾದಿಗಳಲ್ಲಿಯೂ ಅನ್ಯರಿಂದ ಮಾಡಿಸಿ) ಮಾಡಿಕೊಂಡು ಧಾರಣ ಮಾಡತಕ್ಕದ್ದು.

**ಓಂಕಾರೋಽಗ್ನಿಶ್ಚ ನಾಗಶ್ಚ ಸೋಮಃ ಪಿತೃಪ್ರಜಾಪತೀ ।**
**ವಾಯುಸೂರ್ಯೌ ವಿಶ್ವೇದೇವಾ ಇತ್ಯೇತಾಸ್ತಂತುದೇವತಾಃ ॥**

ಎಂಬ ಒಂಬತ್ತು ತಂತುದೇವತೆಗಳ ಅಧಿಷ್ಠಾನಕ್ಕಾಗಿ ಉಪವೀತದ ಒಂದೊಂದು ಎಳೆಯಲ್ಲಿ ಒಂಬತ್ತು ಒಂಬತ್ತು ತಂತುಗಳು; ನಮ್ಮ ದೇಹವು ಸದಾ ಪವಿತ್ರವಾಗಿ ಪರಮಾತ್ಮನ ಅಧಿಷ್ಠಾನವುಳ್ಳದ್ದಾಗಿರಬೇಕೆಂದು ಪವಿತ್ರ

(ಬ್ರಹ್ಮ)ಗ್ರಂಥಿಯ ಸೂಚನೆ. ಇಷ್ಟು ಮಾತ್ರವಲ್ಲದೆ ನಮ್ಮ ಶರೀರದಲ್ಲಿರುವ ಇಡಾ-ಪಿಂಗಳಾ-ಸುಷುಮ್ನಾದಿ ನಾಡಿಗಳ ಸೂಚನೆಯನ್ನೂ ಈ ಉಪವೀತವು ನಮಗೆ ಕೊಡುತ್ತದೆ.

ಪೂರ್ವದಲ್ಲಿ ಉಪವೀತವನ್ನು ಧಾರಣ ಮಾಡದೆ, ಅದರ ಮಾಹಾತ್ಮ್ಯವನ್ನು ತಿಳಿಯದೆ ಅಥವಾ ಅದನ್ನು ಧಾರಣ ಮಾಡಿದ ಉದ್ದೇಶವನ್ನು ಅನುಸರಿಸದೆ ಯಜ್ಞ ಮಾಡಿದ ಅಸುರರಿಗೆ ಪ್ರಾಪ್ತವಾಗದ ಸ್ವರ್ಗಾದಿ ಸಾಮ್ರಾಜ್ಯವು ಅದನ್ನು ಧರಿಸಿ ಯಜ್ಞ ಮಾಡಿದ ದೇವತೆಗಳಿಗೆ ಪ್ರಾಪ್ತವಾದುದರಿಂದ ಅದಕ್ಕೆ ಯಜ್ಞೋಪವೀತ ಎಂದು ಹೆಸರು ಬಂದಿತು.

ಹಾಗಾದರೆ ಈ ಉಪವೀತವು ಹೇಗಿರತಕ್ಕದ್ದು, ಎಷ್ಟೆಷ್ಟನ್ನು ಧರಿಸತಕ್ಕದ್ದು, ಅದನ್ನು ಸದಾ ಪವಿತ್ರವಾಗಿ ಹೇಗೆ ಇಟ್ಟುಕೊಳ್ಳತಕ್ಕದ್ದು ಎಂದರೆ-

**ತ್ರಿವೃತಂ ಚೋಪವೀತಂ ಚ ತತ್ರೈಕೋ ಗ್ರಂಥಿರಿಷ್ಯತೇ ।**
**ನಾಭೇರೂರ್ಧ್ವಮನಾಯುಷ್ಯಮಧೋ ನಾಭೇಸ್ತಪಃಕ್ಷಯಃ ॥**

ಉಪವೀತವು ಮೂರು ಎಳೆಗಳಿಂದಲೂ ಒಂದು ಗ್ರಂಥಿಯಿಂದಲೂ ಕೂಡಿದ್ದಾಗಿ ಧಾರಣ ಮಾಡಿದ ಕಾಲದಲ್ಲಿ ನಾಭಿಗೆ ಸರಿಯಾಗಿ ಇರಬೇಕು. ನಾಭಿಯ ಮೇಲಿದ್ದರೆ ಆಯುಸ್ಸು ಕ್ಷೀಣ; ನಾಭಿಯ ಕೆಳಗಿದ್ದರೆ ತಪಸ್ಸಿಗೆ ಹ್ರಾಸ.

**ಯಜ್ಞೋಪವೀತೇ ದ್ವೇ ಧಾರ್ಯೇ ಶ್ರೌತೇ ಸ್ಮಾರ್ತೇ ಚ ಕರ್ಮಣಿ ।**
**ವಸ್ತ್ರಾಭಾವೇ ತೃತೀಯಂ ತು ಗೃಹಸ್ಥೋ ಧಾರಯೇದ್ದ್ವಿಜಃ ॥**

**ಚತುರ್ಥಮುತ್ತರೀಯಾರ್ಥಮಾಯುಷ್ಕಾಮೋ ಬಹೂನ್ಯಪಿ ।**
**ಗೃಹಸ್ಥಸ್ಯ ತ್ರಿವಿಧಂ ಪ್ರೋಕ್ತಮೇಕಂ ವೈ ಬ್ರಹ್ಮಚಾರಿಣಃ ॥**

ಗೃಹಸ್ಥಾಶ್ರಮಿಯು ಶ್ರೌತಸ್ಮಾರ್ತಕರ್ಮದಲ್ಲಿ ಎರಡು ಉಪವೀತಗಳನ್ನು ಧರಿಸ ತಕ್ಕದ್ದು; ಉಡುವ ವಸ್ತ್ರವಿಲ್ಲದ ದೋಷಪರಿಹಾರಕ್ಕೆ ಮೂರನೆಯದು; ಉತ್ತರೀಯದ ಬದಲು ನಾಲ್ಕನೆಯದು. ಆಯುಸ್ಸನ್ನು ಬಯಸುವವರು ಇನ್ನೂ ಹೆಚ್ಚು ಉಪವೀತಗಳನ್ನು ಧರಿಸಬಹುದು. ಬ್ರಹ್ಮಚಾರಿಯು ಯಾವಾಗಲೂ ಒಂದನ್ನೇ ಧರಿಸಿಕೊಳ್ಳ ತಕ್ಕದ್ದು.[೧೬ಅ]

---

೧೬ಅ. ಗೃಹಸ್ಥಸ್ಯ ವನಸ್ಥಸ್ಯ ಸೂತ್ರಂ ಪ್ರತಿ ಪುನಃ ಪುನಃ । ಮಂತ್ರೋಚ್ಚಾರಣಮಾಚಾಮೋ ದ್ವಿತಯಂ ಕ್ರಮಶಃ ಸ್ಮೃತಮ್ ॥

-ಗೃಹಸ್ಥನು, ವಾನಪ್ರಸ್ಥನು 'ಯಜ್ಞೋಪವೀತಂ....' ಎಂಬ ಮಂತ್ರವನ್ನು ಮೂರಾವರ್ತಿ ಹೇಳಿ ಉಪವೀತವನ್ನು ಧರಿಸಿ ಎರಡು ಸಲ ಆಚಮನೆ ಮಾಡಿ ಪುನಃ ಆ ಮಂತ್ರವನ್ನು ಮೂರಾವರ್ತಿ ಹೇಳಿ ಎರಡನೆಯ ಉಪವೀತವನ್ನು ಧರಿಸಿ ಪುನಃ ಎರಡುಸಲ ಆಚಮನೆ ಮಾಡಬೇಕು.

ಸಾವಿತ್ರ್ಯಾ ದಶಕೃತ್ವಾಽದ್ಭಿರ್ಮಂತ್ರಿತಾಭಿಸ್ತದುಕ್ಷಯೇತ್ । ವಿಚ್ಛಿನ್ನಂ ವಾಽಪ್ಯಧೋಯಾತಂ ಭುಕ್ತ್ವಾ ಧಾರಿತಮುತ್ಸೃಜೇತ್ ॥

ಯಜ್ಞೋಪವೀತಧಾರಣೆಯನಂತರ ಉಪವೀತವನ್ನು ಹಿಡಿದುಕೊಂಡು ಹತ್ತುಸಲ ಗಾಯತ್ರೀಮಂತ್ರವನ್ನು ಜಪಿಸಿ ಹಳೆಯ ಉಪವೀತವನ್ನು ಮೇಲಿಂದ ಕೆಳಗೆ ಪಾದದವರೆಗೆ ತಂದು ಅಲ್ಲಿಂದ ಕೆಳಗೆ ತೆಗೆದು ತುಂಡುಮಾಡಿ 'ಸಮುದ್ರಂ ಗಚ್ಛ ಸ್ವಾಹಾ' ಎಂದು ನೀರಿಗೆ ಹಾಕಬೇಕು. ಯಾವಾಗಲೂ ಈ ಉಪವೀತ ತುಂಡಾದಾಗ, ಕುತ್ತಿಗೆಯಿಂದ ಕೆಳಗೆ ಬಿದ್ದಾಗ ಊಟದನಂತರ ಹಾಕಿಕೊಂಡ ಉಪವೀತವನ್ನು ಬೇರೆ ನೂತನವನ್ನು ಧರಿಸಿದನಂತರ ಇದನ್ನು ವಿಸರ್ಜಿಸಬೇಕು. ಉತ್ತರಭಾರತದಲ್ಲಿ ನವತಂತುದೇವತೆಗಳನ್ನು ಬೇರೆ ರೀತಿಯಾಗಿ ಹೇಳುತ್ತಾರೆ.

ಭೂರ್ವಾರಿ ತೇಜೋ ವಾಯುಃ ಖಂ ಪ್ರಾಣ ಆತ್ಮತ್ರಯಂ ತಥಾ । ಕ್ರಮಾದ್ಭವಂತಿ ತಂತೂನಾಂ ನವಾನಾಂ ಅಧಿದೇವತಾಃ । ಗ್ರಂಥಿತ್ರಯ ಸ್ಯಾಪ್ಯಧಿಪಾಃ ಪಿತಾಮಹ ಹರೀಶ್ವರಾಃ । ಯಜ್ಞೋಪವೀತಾಕಾರಸ್ಯ ಪರಂ ಬ್ರಹ್ಮಾಧಿದೈವತಮ್ ॥

ಪೃಥಿವಿ, ಆಪಃ, ತೇಜಃ, ವಾಯುಃ, ಆಕಾಶಃ, ಪ್ರಾಣಃ, ಆತ್ಮಾ, ಅಂತರಾತ್ಮಾ, ಪರಮಾತ್ಮಾ । ಗ್ರಂಥಿತ್ರಯೇ -ಬ್ರಹ್ಮವಿಷ್ಣುಮಹೇಶ್ವರಾಃ । ಯಜ್ಞೋಪವೀತೇ ಸರ್ವಾಂತರ್ಯಾಮಿ ಪರಬ್ರಹ್ಮಸ್ವರೂಪೀ ಶ್ರೀಮನ್ನಾರಾಯಣಃ ಇತಿ ॥

**ಬ್ರಹ್ಮಸೂತ್ರಂ ವಿನಾ ಭುಂಕ್ತೇ ವಿಣ್ಮೂತ್ರೇ ಕುರುತೇಽಥ ವಾ ।**
**ಗಾಯತ್ರ್ಯಷ್ಟಸಹಸ್ರೇಣ ಪ್ರಾಣಾಯಾಮೇನ ಶುದ್ಧ್ಯತಿ ॥**

ಯಜ್ಞೋಪವೀತವಿಲ್ಲದೆ ಊಟ ಮಾಡಿದರೆ ಅಥವಾ ಮಲಮೂತ್ರ ವಿಸರ್ಜನೆ ಮಾಡಿದರೂ ಆ ದೋಷಪರಿಹಾರಕ್ಕಾಗಿ ಪ್ರಾಣಾಯಾಮಪೂರ್ವಕ ಎಂಟು ಸಹಸ್ರ ಗಾಯತ್ರೀಜಪ ಮಾಡಬೇಕು.

**ಸ್ವದಕ್ಷಿಣಶ್ರುತೌ ನ್ಯಸ್ಯ ಬ್ರಹ್ಮಸೂತ್ರಂ ಸಮಾಹಿತಃ ।**
**ಉದಙ್ಮುಖೋ ದಿವಾನಕ್ತಂ ದಕ್ಷಿಣಾಮುಖ ಸಂಸ್ಥಿತಃ ॥**

ಉಪವೀತವನ್ನು ತನ್ನ ಬಲಕಿವಿಗೆ ಸಿಕ್ಕಿಸಿ ಮೌನಿಯಾಗಿ ಹಗಲಲ್ಲಿ ಉತ್ತರಮುಖ ವಾಗಿಯೂ, ರಾತ್ರಿಯಲ್ಲಿ ದಕ್ಷಿಣಮುಖವಾಗಿಯೂ ಮಲಮೂತ್ರವಿಸರ್ಜನೆ ಮಾಡಬೇಕು.

**ಆದಿತ್ಯಾ ವಸವೋ ರುದ್ರಾ ವಾಯುರಗ್ನಿಶ್ಚ ಧರ್ಮರಾಟ್ ।**
**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।**
**ವಿಪ್ರಸ್ಯ ದಕ್ಷಿಣೇ ಕರ್ಣೇ ನಿವಸಂತಿ ಹಿ ಸರ್ವದಾ ॥**

"ಬ್ರಾಹ್ಮಣನ ಬಲಕಿವಿಯಲ್ಲಿ ನಿತ್ಯದಲ್ಲಿಯೂ ಆದಿತ್ಯರು, ವಸುಗಳು, ರುದ್ರರು, ವಾಯು, ಅಗ್ನಿ, ಧರ್ಮರಾಜ, ಪುಷ್ಕರಾದಿ ತೀರ್ಥಗಳೂ ಗಂಗೆ ಮೊದಲಾದ ನದಿಗಳೂ ವಾಸಮಾಡುತ್ತಿವೆ" – ಎಂಬ ವಚನದಂತೆ ಬಲ ಕಿವಿಯು ಪವಿತ್ರವಾದುದ ರಿಂದ ಮೂತ್ರಪುರೀಷೋತ್ಸರ್ಜನಾದಿಕಾಲಗಳಲ್ಲಿ ದೇಹವು ಅಶುಚಿಯಾಗುವುದರಿಂದ ಅಂತಹ ಸಂದರ್ಭಗಳಲ್ಲಿ ಉಪವೀತವನ್ನು ಮಾಲಾಕಾರವಾಗಿ ಹಿಂದಿನಿಂದ ಬಲಕಿವಿಗೆ ಸಿಕ್ಕಿಸಿಕೊಂಡು ಪವಿತ್ರವಾಗಿ ಇರಿಸಿಕೊಳ್ಳತಕ್ಕದ್ದು.

ಈ ರೀತಿಯಾಗಿ ಅಭಿಮಂತ್ರಿಸಿದ ಯಜ್ಞೋಪವೀತವನ್ನು ಧರಿಸುವುದರಿಂದ ಆ ಯಜ್ಞೋಪವೀತದಲ್ಲಿ ಸನ್ನಿಹಿತರಾಗಿರುವ ದೇವತೆಗಳು ನಮ್ಮೊಡನೆ ಇದ್ದು ರಕ್ಷಿಸಲಿ ಎಂದು ಪ್ರಾರ್ಥಿಸಬೇಕು. ಅಷ್ಟೇ ಅಲ್ಲದೆ ಇದರ ಧಾರಣೆಯಿಂದ ನಮ್ಮಲ್ಲಿರುವ ಅಶುಚಿ ದೂರವಾಗಿ ಶ್ರೌತಸ್ಮಾರ್ತಕರ್ಮಾನುಷ್ಠಾನಗಳನ್ನು ಮಾಡಲು ಅರ್ಹತೆ ಹಾಗೂ ವೀರ್ಯವತ್ವವನ್ನು ತಂದುಕೊಡುವುದು. ತ್ರಿಕಾಲಸಂಧ್ಯಾವಂದನ, ಗಾಯತ್ರಿ ಅನುಷ್ಠಾನದಿಂದ ದೇವತಾ-ಸಾನ್ನಿಧ್ಯ ತುಂಬುವುದು. ದರ್ಭೆ ಇಲ್ಲದ ಸಂದರ್ಭದಲ್ಲಿ ಯಜ್ಞೋಪವೀತದ ಪವಿತ್ರಗ್ರಂಥಿಯನ್ನು ಹಿಡಿದುಕೊಂಡು ಬ್ರಹ್ಮಯಜ್ಞ, ದೇವಋಷಿ, ಆಚಾರ್ಯ, ತರ್ಪಣಾದಿಗಳನ್ನು ಕೊಡುವುದರಿಂದ ದೇವತೆಗಳು ತೃಪ್ತರಾಗುತ್ತಾರೆ. ಶೂದ್ರಕೃತ ಯಜ್ಞೋಪವೀತ, ಅಂಗಡಿಯಿಂದ ತಂದ ಯಜ್ಞೋಪವೀತವು ಅಪವಿತ್ರ, ಅದರಲ್ಲಿ ದೇವತಾ-ಸಾನ್ನಿಧ್ಯವಿರುವುದಿಲ್ಲ. ದೇವತಾಪ್ರತಿಷ್ಠೆ ಮಾಡಿದರೂ ಅಪ್ರಯೋಜಕವಾಗುವುದು. ಅಂತಹ ಯಜ್ಞೋಪವೀತಧಾರಣೆ ಅದು ಕೇವಲ ತಂತುಮಾತ್ರ ಧಾರಣೆಯಾಗುವುದು. ಆದುದರಿಂದ ಸರ್ವರೂ ಇದರ ಮಹತ್ತ್ವವನ್ನು ಜ್ಞಾಪಕದಲ್ಲಿಟ್ಟುಕೊಂಡು ಅದರ ಉದ್ದೇಶವನ್ನು ಸಂಪೂರ್ಣವಾಗಿ ನೆರವೇರಿಸತಕ್ಕದ್ದು.

ಯಜ್ಞೋಪವೀತವನ್ನು ಕುತ್ತಿಗೆಯಿಂದ ತೆಗೆದು ತೊಳೆಯಬಾರದು. ಅದರಲ್ಲಿ ಗುಗ್ಗಿಕಡ್ಡಿ, ಬೀಗದಕೈ ಮುಂತಾದವುಗಳನ್ನು ಹಾಕಿಕೊಳ್ಳಬಾರದು. ಈಗಿನ ಕಾಲದಲ್ಲಿ ಸ್ಪರ್ಶಾಸ್ಪರ್ಶದೋಷ, ಭಕ್ಷ್ಯಾಭಕ್ಷಣದೋಷ, ರಜಸ್ವಲಾನಿಯಮೋಲ್ಲಂಘನ ಹಾಗೂ ಬೇಕರಿ-ಹೋಟೆಲು ಇತ್ಯಾದಿಗಳಲ್ಲಿ ಆಹಾರ ಸ್ವೀಕರಿಸುವುದರಿಂದ ಕರ್ಮಭ್ರಷ್ಟನಾಗುವನು. ಆದುದರಿಂದ ಯಾವುದೇ ದೇವತಾ ಸತ್ಕರ್ಮಾಚರಣೆಯ ಸಂದರ್ಭದಲ್ಲಿ ಮೊದಲು ಪಂಚಗವ್ಯಪ್ರಾಶನ, ಯಜ್ಞೋಪವೀತಧಾರಣ ಮಾಡಿಕೊಂಡು ಕರ್ಮಾರಂಭ ಮಾಡಬೇಕು.

**ಉಪಾಕರ್ಮಣಿ ಸೂತಾಂತೇ ಯಾತೇ ಮಾಸೇ ಚತುಷ್ಟಯೇ ।**
**ಧೃತ್ವಾ ನೂತ್ನಾನಿ ಸೂತ್ರಾಣಿ ಪುರಾಣಾನಿ ವಿಸರ್ಜಯೇತ್ ॥**

**ಜಾತಾಶೌಚೇ ಮೃತಾಶೌಚೇ ಗತೇಮಾಸೇ ತೃತೀಯಕೇ ।**
**ಉಪಾಕರ್ಮಣಿ ಚೋತ್ಸರ್ಗೇ ಜೀರ್ಣತಂತುಂ ವಿಸರ್ಜಯೇತ್ ॥**

ಜಾತಾಶೌಚ-ಮೃತಾಶೌಚಶುದ್ಧಿಯ ದಿನಗಳಲ್ಲಿಯೂ, ಒಂದು ಸಲ ಹಾಕಿಕೊಂಡ ಯಜ್ಞೋಪವೀತಕ್ಕೆ ಮೂರು ಅಥವಾ ನಾಲ್ಕು ತಿಂಗಳನಂತರವೂ, ಉತ್ಸರ್ಜನ ಉಪಾಕರ್ಮದ ದಿವಸವೂ ಹೊಸ ಉಪವೀತಧಾರಣೆ ಮಾಡಬೇಕು.

## ಯಜ್ಞೋಪವೀತ ಪೂಜಾವಿಧಿಃ

**ಸಂಕಲ್ಪಃ**

**(ದ್ವಿರಾಚಮ್ಯ, ಪ್ರಾಣಾನಾಯಮ್ಯ, ದೇಶಕಾಲಾದೀನುಚ್ಚಾರ್ಯ) ಶ್ರೌತಸ್ಮಾರ್ತಕರ್ಮಾನುಷ್ಠಾನಯೋಗ್ಯತಾಸಿದ್ಧ್ಯರ್ಥಂ [ಜಾತಾಶೌಚ-ಮೃತಾಶೌಚಾದಿ-ಶುದ್ಧ್ಯರ್ಥಂ] ಯಜ್ಞೋಪವೀತಧಾರಣಮಹಂ ಕರಿಷ್ಯೇ ॥ (ಇತಿ ಸಂಕಲ್ಪ್ಯ ದೇವಾರ್ಪಿತಮ್ ಉಪವೀತಂ ಗೃಹೀತ್ವಾ ದಶವಾರಂ ಗಾಯತ್ರೀಂ ಜಪೇತ್ ॥) ತದಂಗತಯಾ ಉಪವೀತಸಂಸ್ಕಾರಂ ಕರಿಷ್ಯೇ ॥ (ಸ್ವಪುರತಃ ಚತುರಸ್ರಮಂಡಲಂ ಕೃತ್ವಾ।)**

**ಓಂ ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾ ನಃ ಶರ್ಮ ಸಪ್ರಥಃ ॥ ಓಮ್ ॥** (ಇತಿ ಮಂತ್ರೇಣ ಧಾರಣೀಯಮ್ ಉಪವೀತಂ ಭೂಮೌ ಮಂಡಲೋಪರಿ ನಿಕ್ಷಿಪ್ಯ)

ಬ್ರಹ್ಮಜಜ್ಞಾನಂ ಗೌತಮೋ ವಾಮದೇವಸ್ತ್ರಿಷ್ಟುಪ್ । ಸೂತ್ರಕರಣೇ ವಿನಿಯೋಗಃ ॥

**ಓಂ ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿ ಸೀಮತಃ ಸುರುಚೋ ವೇನ ಆವಃ । ಸಬುಧ್ನ್ಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿವಃ ॥**

ಇದಂ ವಿಷ್ಣುಃ ಕಾಣ್ವೋ ಮೇಧಾತಿಥಿಃ ವಿಷ್ಣುರ್ಗಾಯತ್ರೀ । ಸೂತ್ರತ್ರಿಗುಣೀಕರಣೇ ವಿನಿಯೋಗಃ ॥

**ಓಮ್ ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಮ್ । ಸಮೂಢಮಸ್ಯ ಪಾಂಸುರೇ ॥**

ತ್ರ್ಯಂಬಕಂ ಮೈತ್ರಾವರುಣಿರ್ವಸಿಷ್ಠೋ ರುದ್ರೋನುಷ್ಟುಪ್ । ಗ್ರಂಥಿಬಂಧನೇ ವಿನಿಯೋಗಃ ॥

**ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್ । ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥**

ಆಪೋಹಿಷ್ಠೇತಿ ತೃಚಸ್ಯಾಂಬರೀಷಃ ಸಿಂಧುದ್ವೀಪ ಆಪೋ ಗಾಯತ್ರೀ । ಅಭಿಮಂತ್ರಣೇ ವಿನಿಯೋಗಃ ॥

**ಓಮ್ ಆಪೋ ಹಿ ಷ್ಠಾ .......... ಜನಯಥಾ ಚ ನಃ ॥**

**ಓಂ ಹಿರಣ್ಯವರ್ಣಾಃ ಶುಚಯಃ ಪಾವಕಾ ಯಾಸು ಜಾತಃ ಕಶ್ಯಪೋ ಯಾಸ್ವಿಂದ್ರಃ । ಅಗ್ನಿಂ**

ಯಾ ಗರ್ಭಂ ದಧಿರೇ ವಿರೂಪಾಸ್ತಾನ ಆಪಃ ಶಽಸ್ಯೋನಾ ಭವಂತು ॥ ಪವಮಾನಃ ಸುವರ್ಜನಃ। ಪವಿತ್ರೇಣ ವಿಚರ್ಷಣಿಃ। ಯಃ ಪೋತಾ ಸ ಪುನಾತು ಮಾ । ಪುನಂತು ಮಾ ದೇವಜನಾಃ ॥ ಪುನಂತು ಮನವೋ ಧಿಯಾ । ಪುನಂತು ವಿಶ್ವ ಆಯವಃ। ಜಾತವೇದಃ ಪವಿತ್ರವತ್ ॥

ತಂತುದೇವತಾಽಽವಾಹನಮ್

ಓಂಕಾರೋಽಗ್ನಿಶ್ಚ ನಾಗಶ್ಚ ಸೋಮಃ ಪಿತೃಪ್ರಜಾಪತೀ । ವಾಯುಸೂರ್ಯೌ ವಿಶ್ವೇದೇವಾ ಇತ್ಯೇತಾಸ್ತಂತುದೇವತಾಃ ॥ ತಂತುದೇವತಾ ಆವಾಹಯಾಮಿ ॥

ಪ್ರಥಮತಂತೌ ಓಂಕಾರಂ ಆವಾಹಯಾಮಿ । ದ್ವಿತೀಯತಂತೌ ಅಗ್ನಿಂ ಆವಾಹಯಾಮಿ । ತೃತೀಯತಂತೌ ನಾಗಾನ್ ಆವಾಹಯಾಮಿ ।

ಚತುರ್ಥತಂತೌ ಸೋಮಂ ಆವಾಹಯಾಮಿ । ಪಂಚಮತಂತೌ ಪಿತೄನ್ ಆವಾಹಯಾಮಿ । ಷಷ್ಠತಂತೌ ಪ್ರಜಾಪತಿಮ್ ಆವಾಹಯಾಮಿ ।

ಸಪ್ತಮತಂತೌ ವಾಯುಂ ಆವಾಹಯಾಮಿ । ಅಷ್ಟಮತಂತೌ ಸೂರ್ಯಮ್ ಆವಾಹಯಾಮಿ । ನವಮತಂತೌ ವಿಶ್ವಾನ್ ದೇವಾನ್ ಆವಾಹಯಾಮಿ ।

ಪ್ರಥಮದೋರಕೇ ಋಗ್ವೇದಮ್ ಆವಾಹಯಾಮಿ । ದ್ವಿತೀಯದೋರಕೇ ಯಜುರ್ವೇದಮ್ ಆವಾಹಯಾಮಿ । ತೃತೀಯದೋರಕೇ ಸಾಮವೇದಮ್ ಆವಾಹಯಾಮಿ । ಗ್ರಂಥೌ ಅಥರ್ವವೇದಮ್ ಆವಾಹಯಾಮಿ ।

ತತಃ ಪ್ರತಿಯಜ್ಞೋಪವೀತಂ ದಶವಾರಂ ಗಾಯತ್ರೀಮಂತ್ರಂ ಜಪ್ತ್ವಾ ಷೋಡಶೋಪಚಾರೈಃ ಸಂಪೂಜ್ಯ ಲಕ್ಷ್ಮೀನಾರಾಯಣಾಯ ನಿವೇದ್ಯ ।

ಓಂ ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಮ್ ॥ ಓಮ್ ॥

(ಇತಿ ಮಂತ್ರೇಣ ಉದ್ಧೃತ್ಯ)

ಸೂರ್ಯದರ್ಶನಮ್

ಓಮ್ ಉದ್ಯನ್ನದ್ಯ ಮಿತ್ರಮಹ ಆರೋಹನ್ನುತ್ತರಾಂ ದಿವಮ್ । ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥

ಓಮ್ ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಮ್ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥ ಓಮ್ ॥

(ಇತಿ ಮಂತ್ರೇಣ ಸೂರ್ಯಾಯ ದರ್ಶಯಿತ್ವಾ ಲೋಕನ್ಯಾಸಂ ಕುರ್ಯಾತ್ ॥)

**ಧಾರಣಮ್**

ಯಜ್ಞೋಪವೀತಮಿತ್ಯಸ್ಯ ಮಂತ್ರಸ್ಯ ಪರಬ್ರಹ್ಮ ಋಷಿಃ । ತ್ರಿಷ್ಟುಪ್ ಛಂದಃ । ಪರಮಾತ್ಮಾ ದೇವತಾ । ಉಪವೀತಧಾರಣೇ ವಿನಿಯೋಗಃ ॥

**ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ ॥ ಓಮ್ ॥**

(ಇತಿ ತ್ರಿವಾರಮುಕ್ತ್ವಾ ಧಾರಯೇತ್ । ಆಚಮ್ಯ ದಶವಾರಂ ಗಾಯತ್ರೀಂ ಜಪೇತ್)

**ಜೀರ್ಣೋಪವೀತವಿಸರ್ಜನಮ್**

**ಉಪವೀತಂ ಛಿನ್ನತಂತುಂ ಜೀರ್ಣಂ ಕಶ್ಮಲದೂಷಿತಮ್ ।**
**ವಿಸೃಜಾಮಿ ಜಲೇ ಬ್ರಹ್ಮವರ್ಚೋ ದೀರ್ಘಾಯುರಸ್ತು ಮೇ ॥**

(ಇತಿ ಜೀರ್ಣೋಪವೀತಂ ವಿಸೃಜ್ಯ ಕೃಷ್ಣಾರ್ಪಣಂ ಕೃತ್ವಾ ಆಚಾಮೇತ್ । ನಾಮತ್ರಯಂ ಜಪೇತ್ ॥)

॥ ಇತಿ ಯಜ್ಞೋಪವೀತಧಾರಣಂ ಸಂಪೂರ್ಣಮ್ ॥



## ॥ ಋಗ್ವೇದೀಯಃ ಪುಣ್ಯಾಹವಾಚನವಿಧಿಃ[೧೭] ॥

### ಪುಣ್ಯಾಹ ಮಂಡಲ[೧೮]

॥श्री:॥



ಆಚಮ್ಯ, ಪವಿತ್ರಂ ಧೃತ್ವಾ, ಆಸನ ಪ್ರಾಣಾಯಾಮಾದಿಕಂ ಕೃತ್ವಾ.....

**ಗಂಗೇ ಚ ಯಮುನೇ........ ಜಲೇಽಸ್ಮಿನ್ ಸನ್ನಿಧಿಂ ಕುರು ॥**

(ಇತಿ ಜಲಶುದ್ಧಿಂ ಚ ಕೃತ್ವಾ ದೇಶಕಾಲೌ ಸಂಕೀರ್ತ್ಯ)

.............**ಶುಭಪುಣ್ಯತಿಥೌ ಅಸ್ಮಾಕಂ ಸಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯಾಯುರಾರೋಗ್ಯೈಶ್ವರ್ಯಾ-**

---

೧೭. ಸ್ವಸ್ತಿವಾಚನಮತ್ರೇಷ್ಟಂ ಸರ್ವೇಷಾಮೃದ್ಧಿಕರ್ಮಣಾಂ । ಆದಾವಂತೇ ಚ ಕರ್ತವ್ಯಂ ಇತಿ ಯಜ್ಞವಿದೋ ವಿದುಃ ॥ ಸಕಲ ಶುಭಕರ್ಮಗಳಲ್ಲಿಯೂ ಆದ್ಯಂತಗಳಲ್ಲಿ ಪುಣ್ಯಾಹವಾಚನವನ್ನು ಮಾಡಬೇಕು.

೧೮. ಅಷ್ಟಾವಿಂಶತಿರೇಖಾಭಿಃ ಸಂಯುತಂ ಪುಣ್ಯಮಂಡಲಮ್ । ದಸ್ರಾದಿತಾರಕಾರೂಪಂ ಹಸ್ತಮಾತ್ರಂ ಲಿಖೇದ್ಬುಧಃ ॥

ಅಭಿಜಿತ್ಸಹಿತ ಅಶ್ವಿನ್ಯಾದಿ ೨೮ ನಕ್ಷತ್ರರೂಪವಾದ ಅರತ್ನಿಮಾತ್ರ (ಒಂದು ಮೊಳ ಉದ್ದ) ಚತುರಸ್ರವಾದ ಪುಣ್ಯಾಹಮಂಡಲವನ್ನು ಬರೆಯಬೇಕು.

**ಧಿವೃದ್ಧ್ಯರ್ಥಂ ಧರ್ಮಾರ್ಥಕಾಮಮೋಕ್ಷಾಖ್ಯಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ [ಜಾತಾಶೌಚಮೃತಾಶೌಚ-ಶುದ್ಧ್ಯರ್ಥಂ] ಶ್ರೀಮನ್ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿವಾಸುದೇವಸಂಕರ್ಷಣಪ್ರದ್ಯುಮ್ನಾ-ನಿರುದ್ಧಚತುರ್ಮೂರ್ತ್ಯಾದ್ಯನಂತಾವತಾರಾತ್ಮಕ ಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ-ಪ್ರೀತ್ಯರ್ಥಂ ಶುದ್ಧ್ಯರ್ಥಂ ವೃದ್ಧ್ಯರ್ಥಮ್ ಅಭ್ಯುದಯಾರ್ಥಮ್ ಏಭಿರ್ಬ್ರಾಹ್ಮಣೈಃ ಸಹ ಸ್ವಸ್ತಿಪುಣ್ಯಾಹವಾಚನಾಖ್ಯಂ ಕರ್ಮ ಕರಿಷ್ಯೇ ॥** (ಇತಿ ಸಂಕಲ್ಪಃ ॥)

ತಂಡುಲೋಪರಿ ಕಲಶದ್ವಯಂ[೧೯] ಪ್ರತಿಷ್ಠಾಪ್ಯ ಪಂಚಗವ್ಯಮೇಲನಂ ಪುಣ್ಯಾಹವಾಚನಕಾಲೇ '**ತಂತುಂ ತನ್ವನ್ನಿ**'ತಿ ಸೂತ್ರವೇಷ್ಟನಾನಂತರಂ ಕಾರ್ಯಮ್ । ಅನ್ಯತ್ ಪದ್ಮಂ ವಿಲಿಖ್ಯ, ತತ್ರ ಧಾನ್ಯೋಪರಿ ಉಕ್ತಪಾತ್ರೇ ಪಂಚಗವ್ಯಮೇಲನಂ ಕಾರ್ಯಮ್ । ಪುಣ್ಯಾಹ ದಕ್ಷಿಣಕಲಶೇ ಪಂಚಗವ್ಯಮೇಲನಂ ನ ಕಾರ್ಯಮ್ । ತತಃ ಪುಣ್ಯಾಹಕಲಶಪೂರಣಮ್ । ತತಃ ಪುಣ್ಯಾಹ ಕಲಶೇನ ಸಾಕಂ ಪಂಚಗವ್ಯಕಲಶದೇವತಾಽಽವಾಹನಂ ಪೂಜಾದಿಕಂ ಚ ಕುರ್ಯಾತ್ ॥)

### ಕಲಶಪ್ರತಿಷ್ಠಾಪನಮ್

ಅಥ ಕಲಶಪ್ರತಿಷ್ಠಾಪನಂ ಕರಿಷ್ಯೇ ॥

ಮಹೀ ದ್ಯೌರಿತಿ ಮೇಧಾತಿಥಿಃ ಕಾಣ್ವಋಷಿಃ । ಗಾಯತ್ರೀಛಂದಃ । ದ್ಯಾವಾ ಪೃಥಿವ್ಯೌದೇವತೇ । ಭೂಸ್ಪರ್ಶನೇ ವಿನಿಯೋಗಃ ॥

**ಓಂ ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಮ್। ಪಿಪೃತಾಂ ನೋ ಭರೀಮಭಿಃ ॥**

ಯೇನ ತೋಕಾಯಾತ್ರೇಯಃ ಶ್ಯಾವಾಶ್ವಃ ಋಷಿಃ । ಸತೋಬೃಹತೀಛಂದಃ। ಮರುತೋ ದೇವತಾಃ । ಧಾನ್ಯಸ್ಪರ್ಶನೇ ವಿನಿಯೋಗಃ ॥

**ಓಂ ಯೇನ ತೋಕಾಯ ತನಯಾಯ ಧಾನ್ಯಂಗ್ಂ ಬೀಜಂ ವಹಧ್ವೇ ಅಕ್ಷಿತಮ್ । ಅಸ್ಮಭ್ಯಂ ತದ್ಧತ್ತನ ಯದ್ವ ಈಮಹೇ ರಾಧೋ ವಿಶ್ವಾಯು ಸೌಭಗಮ್ ॥**

ಓಷಧಯಃ ಆಥರ್ವಣೋಭಿಷಗ್ಋಷಿಃ । ಅನುಷ್ಟುಪ್‌ಛಂದಃ । ಓಷಧಯೋ ದೇವತಾಃ । ಧಾನ್ಯಸ್ಪರ್ಶನೇ ವಿನಿಯೋಗಃ ॥

**ಓಮ್ ಓಷಧಯಃ ಸಂ ವದಂತೇ ಸೋಮೇನ ಸಹ ರಾಜ್ಞಾ। ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ ಪಾರಯಾಮಸಿ ॥**

---

೧೯. ಪ್ರಸ್ಥಧಾನ್ಯೋಪರಿಸ್ಥಾಪ್ಯ ಪೂರ್ಣಂ ಹಿ ಕಲಶದ್ವಯಂ । ದಕ್ಷಿಣಸ್ಥಸ್ಥಿರಶ್ಚೈವ ಉತ್ತರಸ್ಥಶ್ಚರೋ ಭವೇತ್ ॥ ಒಂದು ಪ್ರಸ್ಥ (ಸೇರು) ಅಕ್ಕಿಯ ಮೇಲೆ ಜಲಪೂರಣಮಾಡಿದ ಎರಡು ಕಲಶಗಳಲ್ಲಿ ಬಲಭಾಗದ ಕಲಶ ಸ್ಥಿರ. ಎಡಭಾಗದ ಕಲಶ ಚರವಾಗಿದ್ದು ಎಡಭಾಗದ ಕಲಶವನ್ನೇ ಎತ್ತಿ ಹಿಡಿದುಕೊಂಡು ಪುಣ್ಯಾಹವಾಚನದಲ್ಲಿ ಶಾಂತಿಮಂತ್ರಗಳಿಂದ ಜಲಧಾರೆ ಮಾಡಬೇಕು. ಶುಭಕರ್ಮಣಿ ಪುಣ್ಯಾಹವಾಚನೇ ಕಲಶದ್ವಯಂ । ಸ್ಥಾಪಯೇತ್ ಅಶುಭೇತ್ವೇಕಂ ಇತಿ ಯಜ್ಞವಿದೋ ವಿದುಃ ॥ ಪುಣ್ಯಾಹವಾಚನಕ್ಕೆ ಶುಭಕರ್ಮಗಳಲ್ಲಿ ಎರಡು ಕಲಶ. ಅಪರಕರ್ಮದಲ್ಲಿ ಒಂದೇ ಕಲಶ.

ಆ ಕಲಶೇಷು ಗಾಧಿನೋ ವಿಶ್ವಾಮಿತ್ರಋಷಿಃ । ಗಾಯತ್ರೀಛಂದಃ । ಪವಮಾನಃ ಸೋಮೋದೇವತಾ । ಕಲಶಾಭಿಮಂತ್ರಣೇ ವಿನಿಯೋಗಃ ॥

**ಓಮ್ ಆ ಕಲಶೇಷು ಧಾವತಿ ಶ್ಯೇನೋ ವರ್ಮ ವಿ ಗಾಹತೇ । ಅಭಿ ದ್ರೋಣಾ ಕನಿಕ್ರದತ್ ॥**

ತಂತುಂ ತನ್ವನ್ ದೇವಾ ಋಷಯಃ । ಜಗತೀಛಂದಃ । ಅಗ್ನಿರ್ದೇವತಾ । ಸೂತ್ರವೇಷ್ಟನೇ ವಿನಿಯೋಗಃ ॥

**ಓಂ ತಂತುಂ ತನ್ವನ್ರಜಸೋ ಭಾನುಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್ । ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂ ಜನಮ್ ॥**

ಇಮಂ ಮೇ ಸಿಂಧುಕ್ಷಿತ್ ಪ್ರೈಯಮೇಧಋಷಿಃ । ಜಗತೀಛಂದಃ । ನದ್ಯೋ ದೇವತಾಃ । ಜಲಪೂರಣೇ ವಿನಿಯೋಗಃ ॥

**ಓಮ್ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ । ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾऽऽರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥**

ತಪೋಷ್ಪವಿತ್ರಂ ಪವಿತ್ರ ಆಂಗಿರಸಋಷಿಃ । ಜಗತೀಛಂದಃ । ಪವಮಾನಃ ಸೋಮೋ ದೇವತಾ । ಕೂರ್ಚನ್ಯಾಸೇ ವಿನಿಯೋಗಃ[೨೦] ॥

**ಓಂ ತಪೋಷ್ಪವಿತ್ರಂ ವಿತತಂ ದಿವಸ್ಪದೇ ಶೋಚಂತೋ ಅಸ್ಯ ತಂತವೋ ವ್ಯಸ್ಥಿರನ್ । ಅವಂತ್ಯಸ್ಯ ಪವೀತಾರಮಾಶವೋ ದಿವಸ್ಪೃಷ್ಠಮಧಿ ತಿಷ್ಠಂತಿ ಚೇತಸಾ ॥**

ಸ ಹಿ ರತ್ನಾನಿ ಶ್ಯಾವಾಶ್ವಋಷಿಃ । ಗಾಯತ್ರೀಛಂದಃ । ಸವಿತಾ ದೇವತಾ । ರತ್ನನ್ಯಾಸೇ ವಿನಿಯೋಗಃ ॥

**ಓಂ ಸ ಹಿ ರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ । ತಂ ಭಾಗಂ ಚಿತ್ರಮೀಮಹೇ ॥**

ಗಂಧದ್ವಾರಾಂ ಚಿಕ್ಲೀತಋಷಿಃ । ಅನುಷ್ಟುಪ್‌ಛಂದಃ । ಇಂದಿರಾದೇವತಾ । ಗಂಧವಿಲೋಡನೇ ವಿನಿಯೋಗಃ ॥

**ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪ ಹ್ವಯೇ ಶ್ರಿಯಮ್ ॥**

ಅರ್ಚತ ಪ್ರಾರ್ಚತ ಪ್ರಿಯಮೇಧ ಆಂಗಿರಸಋಷಿಃ । ಅನುಷ್ಟುಪ್‌ಛಂದಃ । ಇಂದ್ರೋದೇವತಾ । ಅಕ್ಷತನ್ಯಾಸೇ ವಿನಿಯೋಗಃ ॥

---

೨೦. ಪೌಷ್ಟಿಕ ಕರ್ಮದಲ್ಲಿ ಊರ್ಧ್ವಮುಖವಾಗಿಯೂ ಶಾಂತಿಕರ್ಮದಲ್ಲಿ ಅಧೋಮುಖವಾಗಿಯೂ ಕಲಶದ ಒಳಗೆ ಕೂರ್ಚವನ್ನು ಇಡಬೇಕು.

**ಓಮ್ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ । ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥**

ಆಯನೇ ತೇ ಸ್ತಂಬಮಿತ್ರಋಷಿಃ । ಅನುಷ್ಟುಪ್‌ಛಂದಃ । ಅಗ್ನಿರ್ದೇವತಾ । ಪುಷ್ಪನ್ಯಾಸೇ ವಿನಿಯೋಗಃ ॥

**ಓಮ್ ಆಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ॥**

ಅಶ್ವತ್ಥೇವ ಆಥರ್ವಣೋಭಿಷಗ್‌ಋಷಿಃ । ಅನುಷ್ಟುಪ್‌ಛಂದಃ । ಓಷಧಯೋ ದೇವತಾಃ । ಪಲ್ಲವನ್ಯಾಸೇ ॥

**ಓಮ್ ಅಶ್ವತ್ಥೇ ವೋ ನಿಷದನಂ ಪರ್ಣೇ ವೋ ವಸತಿಷ್ಕೃತಾ । ಗೋಭಾಜ ಇತ್ಕಿಲಾಸಥ ಯತ್ಸನವಥ ಪೂರುಷಮ್ ॥**[೨೦೮]

ಪೂರ್ಣಾ ದರ್ವಿ ವಿಶ್ವೇದೇವಾಋಷಯಃ । ಅನುಷ್ಟುಪ್‌ಛಂದಃ । ಶತಕ್ರತುರ್ದೇವತಾ । ತಂಡುಲಪೂರ್ಣ-ಪಾತ್ರನ್ಯಾಸೇ ವಿನಿಯೋಗಃ ॥

**ಓಂ ಪೂರ್ಣಾ ದರ್ವಿ ಪರಾ ಪತ ಸುಪೂರ್ಣಾ ಪುನರಾಪತ । ವಸ್ನೇವ ವಿ ಕ್ರೀಣಾವಹಾ ಇಷಮೂರ್ಜꣳ ಶತಕ್ರತೋ ॥**

ಯಾಃ ಫಲಿನೀರ್ಯಾ ಆಥರ್ವಣೋಭಿಷಗ್‌ಋಷಿಃ । ಅನುಷ್ಟುಪ್‌ಛಂದಃ । ಓಷಧಯೋ ದೇವತಾಃ । ಫಲನ್ಯಾಸೇ ವಿನಿಯೋಗಃ ॥

**ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ । ಬೃಹಸ್ಪತಿಪ್ರಸೂತಾಸ್ತಾ ನೋ ಮುಂಚಂತ್ವꣳಹಸಃ ॥**

(ಗಂಧದ್ವಾರೇತಿ ಗಂಧಂ, ಅರ್ಚತ ಪ್ರಾರ್ಚತೇತಿ ಅಕ್ಷತಾನ್, ಆಯನೇ ತೇ ಇತಿ ಪುಷ್ಪಾಣಿ ನಿಕ್ಷಿಪೇತ್ ॥)

ಹಿರಣ್ಯರೂಪಃ ಗೃತ್ಸಮದೋ ಭಾರ್ಗವಃ ಶೌನಕಋಷಿಃ । ತ್ರಿಷ್ಟುಪ್‌ಛಂದಃ । ಅಪಾನ್ನಪಾದ್ದೇವತಾ । ಹಿರಣ್ಯನ್ಯಾಸೇ ವಿನಿಯೋಗಃ ॥

**ಓಂ ಹಿರಣ್ಯರೂಪಃ ಸ ಹಿರಣ್ಯಸಂದೃಗಪಾಂ ನಪಾತ್ ಸೇದು ಹಿರಣ್ಯವರ್ಣಃ । ಹಿರಣ್ಯಯಾತ್ ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥**

---

೨೦೮. ಅಶ್ವತ್ಥೌದುಂಬರಪ್ಲಕ್ಷಚೂತನ್ಯಗ್ರೋಧಪಲ್ಲವಾಃ । ಕಲಶಕ್ಕೆ ಅಶ್ವತ್ಥ, ಅತ್ತಿ, ಮಾವು, ಗೋಳಿ, ಕಿರುಗೋಳಿ ಈ ಐದು ಮರದ ಕುಡಿಗಳೇ ಪಂಚಪಲ್ಲವ. ಈ ಐದರ ಕೆತ್ತೆಯೇ ಕಷಾಯ. ಚೂತಶ್ಚ ಪನಸಶ್ಚೈವ ಪಲಾಶಸ್ಯ ಸಹೋದರೌ । ಎಂದಿದ್ದರಿಂದ ಮಾವು ಮತ್ತು ಹಲಸು ಈ ಎರಡು ಪಲ್ಲವಗಳನ್ನೇ ಈಗ ಇಡಲಾಗುತ್ತದೆ.

ಪವಿತ್ರಂ ತೇ ಆಂಗಿರಸಋಷಿಃ । ಜಗತೀಛಂದಃ । ಪರಮಾನಸೋಮೋದೇವತಾ । ಶಿರಃಕೂರ್ಚನ್ಯಾಸೇ ವಿನಿಯೋಗಃ ॥

**ಓಂ ಪವಿತ್ರಂ ತೇ ವಿತತಂ........ ಇದ್ವಹಂತಸ್ತತ್ ಸಮಾಶತ ॥**

**ಕಲಶಪೂಜಾ**

ತತ್ತ್ವಾ ಯಾಮೀತಿ ಶುನಃಶೇಪಋಷಿಃ । ತ್ರಿಷ್ಟುಪ್ ಛಂದಃ । ವರುಣೋದೇವತಾ । ಕಲಶಮಧ್ಯೇ ವರುಣಸ್ಯಾವಾಹನೇ ವಿನಿಯೋಗಃ ॥

**ಓಂ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾ ಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥**

ಓಂ ಭೂಃ ವರುಣಮಾವಾಹಯಾಮಿ । ಓಂ ಭುವಃ ವರುಣಮಾವಾಹಯಾಮಿ । ಓಂ ಸ್ವಃ ವರುಣಮಾವಾಹಯಾಮಿ । ಓಂ ಭೂರ್ಭುವಃಸ್ವಃ ವರುಣಮಾವಾಹಯಾಮಿ ॥

**ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।**
**ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥ ೧ ॥**

**ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।**
**ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥ ೨ ॥**

**ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ ।**
**ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತೀ ॥ ೩ ॥**

**ಆಯಾಂತು ಮಮ [ಯಜಮಾನಸ್ಯ] ಶಾಂತ್ಯರ್ಥಂ ದುರಿತಕ್ಷಯಕಾರಕಾಃ ।**
**ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ॥ ೪ ॥**

**ಗಂಗೇ ಚ ಯಮುನೇ ಚೈವ (ಕೃಷ್ಣೇ) ಗೋದಾವರಿ ಸರಸ್ವತಿ ।**
**ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥ ೫ ॥**

ಆವಾಹಿತದೇವತಾಭ್ಯೋ ನಮಃ । ಧ್ಯಾಯಾಮಿ । ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ । ಆವಾಹನಂ ಸಮರ್ಪಯಾಮಿ । ಆಸನಂ ಸಮರ್ಪಯಾಮಿ। ಸ್ವಾಗತಂ ಸಮರ್ಪಯಾಮಿ । ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಆಭರಣಂ ಸಮರ್ಪಯಾಮಿ । ಗಂಧಂ ಸಮರ್ಪಯಾಮಿ । ಅಕ್ಷತಾನ್ ಸಮರ್ಪಯಾಮಿ। ಪುಷ್ಪಾಣಿ ಸಮರ್ಪಯಾಮಿ । ಧೂಪಮಾಘ್ರಾಪಯಾಮಿ । ದೀಪಂ ದರ್ಶಯಾಮಿ। ಕಲಶದೇವತಾಭ್ಯೋ ನಮಃ । ನೈವೇದ್ಯಾರ್ಥೇ ಗುಡೋಪಹಾರಮಹಾನೈವೇದ್ಯಂ ಸಮರ್ಪಯಾಮಿ । ತಾಂಬೂಲಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ಸುವರ್ಣಪುಷ್ಪಂ ಸಮರ್ಪಯಾಮಿ । ಮಂತ್ರಪುಷ್ಪಂ ಸಮರ್ಪಯಾಮಿ। ಕಲಶದೇವತಾಭ್ಯೋ ನಮಃ । ಸರ್ವೋಪಚಾರಪೂಜಾಂ ಸಮರ್ಪಯಾಮಿ ॥

## ಇಷ್ಟದೇವತಾಪ್ರಾರ್ಥನಾ

ಸರ್ವೇಷು ಕಾಲೇಷು ಸಮಸ್ತದೇಶೇಷ್ವಶೇಷಕಾರ್ಯೇಷು ತಥೇಶ್ವರೇಶ್ವರಃ ।
ಸರ್ವಸ್ವರೂಪೀ ಭಗವಾನನಾದಿಃ ಮಮಾಸ್ತು ಮಾಂಗಲ್ಯವಿವೃದ್ಧಯೇ ಹರಿಃ ॥ ೧ ॥

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೨ ॥

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ೩ ॥

ಸರ್ವೇಷ್ವಾರಬ್ಧಕಾರ್ಯೇಷು ತ್ರಯಸ್ತ್ರಿಭುವನೇಶ್ವರಾಃ ।
ದೇವಾ ದಿಶಂತು ನಃ ಸಿದ್ಧಿಂ ಬ್ರಹ್ಮೇಶಾನಜನಾರ್ದನಾಃ ॥ ೪ ॥

ಸ್ಮೃತೇ ಸಕಲಕಲ್ಯಾಣಭಾಜನಂ ಯತ್ರ ಜಾಯತೇ ।
ಪುರುಷಂ ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಮ್ ॥ ೫ ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ॥ ೬ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥ ೭ ॥

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥ ೮ ॥

ಕಲಶದೇವತಾಂತರ್ಯಾಮಿಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ವಾಣೀಹಿರಣ್ಯಗರ್ಭಾಭ್ಯಾಂ ನಮಃ । ಉಮಾಮಹೇಶ್ವರಾಭ್ಯಾಂ ನಮಃ । ಶಚೀಪುರಂದರಾಭ್ಯಾಂ ನಮಃ । ಅರುಂಧತೀವಸಿಷ್ಠಾಭ್ಯಾಂ ನಮಃ । ಸೀತಾರಾಮಾಭ್ಯಾಂ ನಮಃ । ಮಾತೃಭ್ಯೋ ನಮಃ । ಪಿತೃಭ್ಯೋ ನಮಃ । ಗುರುಭ್ಯೋ ನಮಃ । ಆಚಾರ್ಯೇಭ್ಯೋ ನಮಃ । ಇಷ್ಟದೇವತಾಭ್ಯೋ ನಮಃ। ಕುಲದೇವತಾಭ್ಯೋ ನಮಃ । ಗ್ರಾಮಾಧಿದೇವತಾಭ್ಯೋ ನಮಃ । ಸರ್ವೇಭ್ಯೋ ದೇವೇಭ್ಯೋ ನಮಃ । ಸರ್ವೇಭ್ಯೋ ಬ್ರಾಹ್ಮಣೇಭ್ಯೋ ನಮಃ । ಸುಮುಹೂರ್ತಮಸ್ತ್ವಿತಿ ಭವಂತೋ ಬ್ರುವಂತು ॥ [ಸುಮುಹೂರ್ತಮಸ್ತು ॥] (ಇತಿ ವಿಪ್ರಾಃ ॥) ಮಾತೃದೇವೋ ಭವ । ಪಿತೃದೇವೋ ಭವ । ಆಚಾರ್ಯದೇವೋ ಭವ। ಅತಿಥಿದೇವೋ ಭವ । ಆಶಿಷಃ ಪ್ರಾರ್ಥಯತೇ । ಪ್ರಾರ್ಥನಾಮಾಹ । ಏತಾಃ ಸತ್ಯಾ ಆಶಿಷಃ ಸಂತು ॥ ದೀರ್ಘಾ ನಾಗಾಃ ನದ್ಯೋ ಗಿರಯಃ ತ್ರೀಣಿ ವಿಷ್ಣುಪದಾನಿ ಚ। ತೇನ ಆಯುಃಪ್ರಮಾಣೇನ ಪುಣ್ಯಾಹಂ ದೀರ್ಘಮಾಯುರಸ್ತು॥ (ಬ್ರಾಹ್ಮಣಹಸ್ತೇ) ಶಿವಾ ಆಪಃ ಸಂತು । [ಸಂತು ಶಿವಾ ಆಪಃ ।] ಅಕ್ಷತಂ ಚಾರಿಷ್ಟಂ ಚಾಸ್ತು । [ಅಸ್ತ್ವಕ್ಷತಮರಿಷ್ಟಂ ಚ ।] ಗಂಧಾಃ ಪಾಂತು । [ಸೌಮಂಗಲ್ಯಂ ಚಾಸ್ತು ।] ಅಕ್ಷತಾಃ ಪಾಂತು । [ಆಯುಷ್ಯಮಸ್ತು ।] ಪುಷ್ಪಾಣಿ ಪಾಂತು । [ಸೌಶ್ರಿಯಮಸ್ತು ।] ತಾಂಬೂಲಾನಿ ಪಾಂತು। [ಐಶ್ವರ್ಯಮಸ್ತು ।] ಸ್ವಸ್ತಿ ದಕ್ಷಿಣಾಃ ಪಾಂತು । [ಬಹು ದೇಯಂ ಚಾಸ್ತು ।] ದೀರ್ಘಮಾಯುಃ ಶ್ರೇಯಃ ಶಾಂತಿಸ್ತುಷ್ಟಿಃ ಪುಷ್ಟಿಶ್ಚಾಸ್ತು। ಶ್ರೀರ್ಯಶೋ ಗೌರ್ವಿದ್ಯಾ ವಿನಯೋ ವಿತ್ತಂ ಬಹುಪುತ್ರತ್ವಮ್ ಆಯುಷ್ಯಂ ಚಾಸ್ತು॥

ಯಂ ಕೃತ್ವಾ ಸರ್ವವೇದಯಜ್ಞಕ್ರಿಯಾಕರಣಕರ್ಮಾರಂಭಾಃ ಶುಭಾಃ ಶೋಭನಾಃ ಪ್ರವರ್ತಂತೇ ತಮಹಮೋಂಕಾರಮಾದಿಂ ಕೃತ್ವಾ ಋಗ್ಯಜುಃಸಾಮಾಶೀರ್ವಚನಂ ಬಹುಋಷಿಮತಂ ಸಂವಿಜ್ಞಾತಂ ಭವದ್ಭಿರನುಜ್ಞಾತೋ ವಾಚಯಿಷ್ಯೇ ॥ [ವಾಚ್ಯತಾಮ್ ॥]

**ಆಶೀರ್ವಚನಮ್**

ಭದ್ರಂ ಕರ್ಣೇಭಿಃ ಗೌತಮಋಷಿಃ । ವಿಶ್ವೇದೇವಾಃ । ತ್ರಿಷ್ಟುಪ್‌ಛಂದಃ । ಆಶೀರ್ವಚನೇ ವಿನಿಯೋಗಃ ॥

**ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥**

ದ್ರವಿಣೋದಾ ಕುತ್ಸಋಷಿಃ । ತ್ರಿಷ್ಟುಪ್‌ಛಂದಃ । ದ್ರವಿಣೋದಾಅಗ್ನಿರ್ದೇವತಾ । ಆಶೀರ್ವಚನೇ ವಿನಿಯೋಗಃ ॥

**ಓಂ ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಃ ಸನರಸ್ಯ ಪ್ರ ಯಂಸತ್ । ದ್ರವಿಣೋದಾ ವೀರವತೀಮಿಷಂ ನೋ ದ್ರವಿಣೋದಾ ರಾಸತೇ ದೀರ್ಘಮಾಯುಃ ॥**

ಸವಿತಾ ಪಶ್ಚಾತಾತ್ ಉಶೋಧಾನಾಕಋಷಿಃ । ತ್ರಿಷ್ಟುಪ್‌ಛಂದಃ । ವಿಶ್ವೇದೇವಾಃದೇವತಾಃ । ಆಶೀರ್ವಚನೇ ವಿನಿಯೋಗಃ ॥

**ಓಂ ಸವಿತಾ ಪಶ್ಚಾತಾತ್ಸವಿತಾ ಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಧರಾತ್ತಾತ್ । ಸವಿತಾ ನಃ ಸುವತು ಸರ್ವತಾತಿಂ ಸವಿತಾ ನೋ ರಾಸತಾಂ ದೀರ್ಘಮಾಯುಃ ॥**

ನವೋನವೋ ಭವತಿ ಸೂರ್ಯಾಸಾವಿತ್ರೀಋಷಿಕಾ । ತ್ರಿಷ್ಟುಪ್‌ಛಂದಃ । ಚಂದ್ರಮಾದೇವತಾಃ । ಆಶೀರ್ವಚನೇ ವಿನಿಯೋಗಃ ॥

**ಓಂ ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಮ್ । ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥**

ಉಚ್ಚಾ ದಿವಿ ಆಂಗಿರಸಋಷಿಃ । ತ್ರಿಷ್ಟುಪ್‌ಛಂದಃ । ಪ್ರಾಜಾಪತಿರ್ದೇವತಾ । ಆಶೀರ್ವಚನೇ ವಿನಿಯೋಗಃ ॥

**ಓಮ್ ಉಚ್ಚಾ ದಿವಿ ದಕ್ಷಿಣಾವಂತೋ ಅಸ್ಥುರ್ಯೇ ಅಶ್ವದಾಃ ಸಹ ತೇ ಸೂರ್ಯೇಣ । ಹಿರಣ್ಯದಾ ಅಮೃತತ್ವಂ ಭಜಂತೇ ವಾಸೋದಾಃ ಸೋಮ ಪ್ರ ತಿರಂತ ಆಯುಃ ॥**

ಆಪ ಉಂದಂತು ಸೋಮಋಷಿಃ । ದ್ವಿಪದಾ ಗಾಯತ್ರೀಛಂಧಃ । ಆಪೋದೇವತಾಃ । ಆಶೀರ್ವಚನೇ ವಿನಿಯೋಗಃ ॥

**ಓಮ್ ಆಪ ಉಂದಂತು ಜೀವಸೇ ದೀರ್ಘಾಯುತ್ವಾಯ ವರ್ಚಸೇ ।**

ಯಸ್ತ್ವಾ ಹೃದಾ ಯಸ್ಮೈ ತ್ವಮಿತ್ಯನಯೋಃ ಆತ್ರೇಯೋ ವಸುಶ್ರುತಃಋಷಿಃ । ತ್ರಿಷ್ಟುಪ್‌ಛಂದಃ । ಅಗ್ನಿರ್ದೇವತಾ । ಆಶೀರ್ವಚನೇ ವಿನಿಯೋಗಃ ॥

**ಓಂ ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನೋಽಮರ್ತ್ಯಂ ಮರ್ತ್ಯೋ ಜೋಹವೀಮಿ । ಜಾತವೇದೋ ಯಶೋ ಅಸ್ಮಾಸು ಧೇಹಿ ಪ್ರಜಾಭಿರಗ್ನೇ ಅಮೃತತ್ವಮಶ್ಯಾಮ್ ॥ ಯಸ್ಮೈ ತ್ವಂ ಸುಕೃತೇ ಜಾತವೇದ ಉ ಲೋಕಮಗ್ನೇ ಕೃಣವಃ ಸ್ಯೋನಮ್ । ಅಶ್ವಿನಂ ಸ ಪುತ್ರಿಣಂ ವೀರವಂತಂ ಗೋಮಂತಂ ರಯಿಂ ನಶತೇ ಸ್ವಸ್ತಿ ॥ ಸಂ ತ್ವಾ ಸಿಂಚಾಮಿ ಯಜುಷಾ ಪ್ರಜಾಮಾಯುರ್ಧನಂ ಚ ॥**

(ಪುರೋಹಿತಃ ಸಹಯಜಮಾನ ಉತ್ಥಾಯ ಏಭಿರ್ಮಂತ್ರೈಃ ಪುಣ್ಯಾಹಕಲಶೋದಕಮೈಶಾನ್ಯಾಂ ಪಾತ್ರಾಂತರೇ ಸಿಂಚೇತ್ ॥)

ವ್ರತನಿಯಮತಪಃಸ್ವಾಧ್ಯಾಯಕ್ರತುದಮದಾನವಿಶಿಷ್ಟಾನಾಂ ಬ್ರಾಹ್ಮಣಾನಾಂ ಮನಃ ಸಮಾಧೀಯತಾಮ್ । [ಸಮಾಹಿತಮನಸಃ ಸ್ಮಃ ॥] ಪ್ರಸೀದಂತು ಭವತಃ [ಪ್ರಸನ್ನಾಃ ಸ್ಮಃ ।] ಶಾಂತಿರಸ್ತು । ಪುಷ್ಟಿರಸ್ತು । ತುಷ್ಟಿರಸ್ತು । ವೃದ್ಧಿರಸ್ತು । ಅವಿಘ್ನಮಸ್ತು । ಆಯುಷ್ಯಮಸ್ತು । ಆರೋಗ್ಯಮಸ್ತು । ಶಿವಂ ಕರ್ಮಾಸ್ತು । ಕರ್ಮಸಮೃದ್ಧಿರಸ್ತು। ಧರ್ಮಸಮೃದ್ಧಿರಸ್ತು । ವೇದಸಮೃದ್ಧಿರಸ್ತು । ಶಾಸ್ತ್ರಸಮೃದ್ಧಿರಸ್ತು। ಪುತ್ರಸಮೃದ್ಧಿರಸ್ತು। ಧನಧಾನ್ಯಸಮೃದ್ಧಿರಸ್ತು। ಇಷ್ಟಸಂಪದಸ್ತು। (ಬಹಿರಪಃ) ಈಶಾನ್ಯಾಂ ಬಹಿರ್ದೇಶೇ ಸರ್ವಾರಿಷ್ಟನಿರಸನಮಸ್ತು। ಯತ್ಪಾಪಂ ತತ್ಪ್ರತಿಹತಮಸ್ತು। (ಅಂತರಪಃ) ಯಚ್ಛ್ರೇಯಸ್ತದಸ್ತು । ಉತ್ತರೇ ಕರ್ಮಣ್ಯವಿಘ್ನಮಸ್ತು । ಉತ್ತರೋತ್ತರಮಹರಹರಭಿವೃದ್ಧಿರಸ್ತು । ಉತ್ತರೋತ್ತರಾಃ ಕ್ರಿಯಾಃ ಶುಭಾಃ ಶೋಭನಾಃ ಸಂಪದ್ಯಂತಾಮ್। ಇಷ್ಟಕಾಮಾಃ ಸಂಪದ್ಯಂತಾಮ್ । ತಿಥಿಕರಣ-ಮುಹೂರ್ತನಕ್ಷತ್ರಸಂಪದಸ್ತು । ತಿಥಿಕರಣಮುಹೂರ್ತನಕ್ಷತ್ರಗ್ರಹಲಗ್ನಾಧಿದೇವತಾಃ ಪ್ರೀಯಂತಾಮ್। ತಿಥಿಕರಣೇ ಮುಹೂರ್ತನಕ್ಷತ್ರೇ ಸಗ್ರಹೇ ಸದೈವತೇ ಪ್ರೀಯೇತಾಮ್ । ದುರ್ಗಾಪಾಂಚಾಲ್ಯೌ ಪ್ರೀಯೇತಾಮ್। ಅಗ್ನಿಪುರೋಗಾಃ ವಿಶ್ವೇದೇವಾಃ ಪ್ರೀಯಂತಾಮ್ । ಇಂದ್ರಪುರೋಗಾಃ ಮರುದ್ಗಣಾಃ ಪ್ರೀಯಂತಾಮ್। ಬ್ರಹ್ಮಪುರೋಗಾಃ ಸರ್ವೇ ವೇದಾಃ ಪ್ರೀಯಂತಾಮ್ । ವಿಷ್ಣುಪುರೋಗಾಃ ಸರ್ವೇ ದೇವಾಃ ಪ್ರೀಯಂತಾಮ್। ಮಾಹೇಶ್ವರೀಪುರೋಗಾ ಉಮಾಮಾತರಃ ಪ್ರೀಯಂತಾಮ್ । ವಸಿಷ್ಠಪುರೋಗಾ ಋಷಿಗಣಾಃ ಪ್ರೀಯಂತಾಮ್। ಅರುಂಧತೀಪುರೋಗಾ ಏಕಪತ್ನ್ಯಃ ಪ್ರೀಯಂತಾಮ್। ಋಷಯಶ್ಛಂದಾಂಸ್ಯಾಚಾರ್ಯಾ ವೇದಾಃ ದೇವಾ ಯಜ್ಞಾಶ್ಚ ಪ್ರೀಯಂತಾಮ್। ಬ್ರಹ್ಮ ಚ ಬ್ರಾಹ್ಮಣಾಶ್ಚ ಪ್ರೀಯಂತಾಮ್ । ಶ್ರೀಸರಸ್ವತ್ಯೌ ಪ್ರೀಯೇತಾಮ್ । ಶ್ರದ್ಧಾಮೇಧೇ ಪ್ರೀಯೇತಾಮ್ । ಭಗವತೀ ಕಾತ್ಯಾಯನೀ ಪ್ರೀಯತಾಮ್ । ಭಗವತೀ ಮಾಹೇಶ್ವರೀ ಪ್ರೀಯತಾಮ್। ಭಗವತೀ ಶಾಂತಿಕರೀ ಪ್ರೀಯತಾಮ್ । ಭಗವತೀ ಋದ್ಧಿಕರೀ ಪ್ರೀಯತಾಮ್। ಭಗವತೀ ವೃದ್ಧಿಕರೀ ಪ್ರೀಯತಾಮ್। ಭಗವಂತೌ ವಿಘ್ನವಿನಾಯಕೌ ಪ್ರೀಯೇತಾಮ್। ಭಗವಾನ್ ಸ್ವಾಮೀ ಮಹಾಸೇನಃ ಸಪತ್ನೀಕಃ ಸಸುತಃ ಸಪಾರ್ಷದಃ ಸರ್ವ-ಸ್ಥಾನಗತಃ ಪ್ರೀಯತಾಮ್ । ಹರಿಹರಹಿರಣ್ಯಗರ್ಭಾಃ ಪ್ರೀಯಂತಾಮ್ । ಸರ್ವಾ ಗ್ರಾಮದೇವತಾಃ ಪ್ರೀಯಂ-ತಾಮ್ । ಸರ್ವಾಃ ಕುಲದೇವತಾಃ ಪ್ರೀಯಂತಾಮ್ । ಸರ್ವಾ ವಾಸ್ತುದೇವತಾಃ ಪ್ರೀಯಂತಾಮ್। (ಬಹಿರಪಃ) ಹತಾ ಬ್ರಹ್ಮದ್ವಿಷಃ। ಹತಾಃ ಪರಿಪಂಥಿನಃ। ಹತಾ ಅಸ್ಯ ಕರ್ಮಣೋ ವಿಘ್ನಕರ್ತಾರಃ । ಶತ್ರವಃ ಪರಾಭವಂ ಯಾಂತು । ಶಾಮ್ಯಂತು ಘೋರಾಣಿ । ಶಾಮ್ಯಂತು ಪಾಪಾನಿ। ಶಾಮ್ಯಂತ್ವೀತಯಃ । (ಅಂತರಪಃ) ಶುಭಾನಿ ವರ್ಧಂತಾಮ್ । ಶಿವಾ ಆಪಃ ಸಂತು । ಶಿವಾ ಋತವಃ ಸಂತು । ಶಿವಾ ಅಗ್ನಯಃ ಸಂತು । ಶಿವಾ ಆಹುತಯಃ ಸಂತು । ಶಿವಾ ಓಷಧಯಃ ಸಂತು । ಶಿವಾ ವನಸ್ಪತಯಃ ಸಂತು । ಶಿವಾ ಅತಿಥಯಃ ಸಂತು। ಅಹೋರಾತ್ರೇ ಶಿವೇ ಸ್ಯಾತಾಮ್ ।

**ನಿಕಾಮೇನಿಕಾಮೇ ನಃ ಪರ್ಜನ್ಯೋ ವರ್ಷತು । ಫಲಿನ್ಯೋ ನ ಓಷಧಯಃ ಪಚ್ಯಂತಾಮ್ । ಯೋಗಕ್ಷೇಮೋ ನಃ ಕಲ್ಪತಾಮ್ ।**

ಶುಕ್ರಾಂಗಾರಕಬುಧಬೃಹಸ್ಪತಿಶನೈಶ್ಚರರಾಹುಕೇತುಸೋಮಸಹಿತಾ ಆದಿತ್ಯಪುರೋಗಾಃ ಸರ್ವೇ ಗ್ರಹಾಃ ಪ್ರೀಯಂತಾಮ್ । ಭಗವಾನ್ನಾರಾಯಣಃ ಪ್ರೀಯತಾಮ್ । ಭಗವಾನ್ ಪರ್ಜನ್ಯಃ ಪ್ರೀಯತಾಮ್ । ಪ್ರೀಯತಾಂ ಭಗವಾನ್ ಸ್ವಾಮೀ ಮಹಾಸೇನಃ । ಪುಣ್ಯಂ ಪುಣ್ಯಾಹಂ ವಾಚಯಿಷ್ಯೇ ॥ [ವಾಚ್ಯತಾಮ್ ॥]

ಉದ್ಗಾತೇವ ಗೃತ್ಸಮದಃಋಷಿಃ । ಅತಿಶಕ್ವರೀಛಂದಃ । ಶಕುಂತೋದೇವತಾ । ಪುಣ್ಯಾಹವಾಚನೇ ವಿನಿಯೋಗಃ ॥

**ಓಮ್ ಉದ್ಗಾತೇವ ಶಕುನೇ ಸಾಮ ಗಾಯಸಿ ಬ್ರಹ್ಮಪುತ್ರ ಇವ ಸವನೇಷು ಶಂಸಸಿ । ವೃಷೇವ ವಾಜೀ ಶಿಶುಮತೀರಪೀತ್ಯಾ ಸರ್ವತೋ ನಃ ಶಕುನೇ ಭದ್ರಮಾ ವದ ವಿಶ್ವತೋ ನಃ ಶಕುನೇ ಪುಣ್ಯಮಾ ವದ ॥ ಓಮ್ ॥**

ಮಹ್ಯಂ ಸಹಕುಟುಂಬಿನೇ ಮಹಾಜನಾನ್ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷಮಾಣಾಯ ಅದ್ಯ .......ಕರ್ಮ ಕರಿಷ್ಯಮಾಣಾಯ .........ಶರ್ಮಣೇ ಪುಣ್ಯಾಹಂ ಭವಂತೋ ಬ್ರುವಂತು ॥ (ಇತಿ ತ್ರಿವಾರಂ ಮಂದ್ರಮಧ್ಯೋಚ್ಚನಿಸ್ವನೈರ್ವದೇತ್ ॥) [ಓಂ ಪುಣ್ಯಾಹಮ್ ॥] (ಇತಿ ತ್ರಿವಾರಂ ವಿಪ್ರಾಃ ಪ್ರತಿವಚನಂ ಬ್ರೂಯುಃ ॥)

ಸ್ವಸ್ತಯೇ ವಾಯುಮ್ ಆತ್ರೇಯಋಷಿಃ । ತ್ರಿಷ್ಟುಪ್‌ಛಂದಃ । ವಿಶ್ವೇದೇವಾಃದೇವತಾಃ । ಪುಣ್ಯಾಹವಾಚನೇ ವಿನಿಯೋಗಃ ॥

**ಓಂ ಸ್ವಸ್ತಯೇ ವಾಯುಮುಪ ಬ್ರವಾಮಹೈ ಸೋಮಂ ಸ್ವಸ್ತಿ ಭುವನಸ್ಯ ಯಸ್ಪತಿಃ । ಬೃಹಸ್ಪತಿಂ ಸರ್ವಗಣಂ ಸ್ವಸ್ತಯೇ ಸ್ವಸ್ತಯ ಆದಿತ್ಯಾಸೋ ಭವಂತು ನಃ ॥**

ಮಹ್ಯಂ ಸಹಕುಟುಂಬಿನೇ ಮಹಾಜನಾನ್ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷಮಾಣಾಯ ಅದ್ಯ ..... ಕರ್ಮ ಕರಿಷ್ಯಮಾಣಾಯ ......ಶರ್ಮಣೇ ಸ್ವಸ್ತಿ ಭವಂತೋ ಬ್ರುವಂತು ॥ [ಓಂ ಆಯುಷ್ಮತೇ ಸ್ವಸ್ತಿ ॥] (ಇತಿ ತ್ರಿವಾರಂ ವದೇಯುಃ ॥)

ಋಧ್ಯಾಮ ಸ್ತೋಮಂ ಭೂತಾಂಶಃ ಕಾಶ್ಯಪಋಷಿಃ । ತ್ರಿಷ್ಟುಪ್‌ಛಂದಃ । ಅಶ್ವಿನೌದೇವತೇ । ಪುಣ್ಯಾಹವಾಚನೇ ವಿನಿಯೋಗಃ ॥

**ಓಮ್ ಋಧ್ಯಾಮ ಸ್ತೋಮಂ ಸನುಯಾಮ ವಾಜಮಾ ನೋ ಮಂತ್ರಂ ಸರಥೇಹೋಪ ಯಾತಮ್ । ಯಶೋ ನ ಪಕ್ವಂ ಮಧು ಗೋಷ್ವಂತರಾ ಭೂತಾಂಶೋ ಅಶ್ವಿನೋಃ ಕಾಮಮಪ್ರಾಃ ॥**

ಮಹ್ಯಂ ಸಹಕುಟುಂಬಿನೇ ಮಹಾಜನಾನ್ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷಮಾಣಾಯ ಅದ್ಯ ......... ಕರ್ಮ ಕರಿಷ್ಯಮಾಣಾಯ ...........ಶರ್ಮಣೇ ಋದ್ಧಿಂ ಭವಂತೋ ಬ್ರುವಂತು । [ಋಧ್ಯತಾಂ] ಋದ್ಧಿಃ ಸಮೃದ್ಧಿಃ (ಇತಿ ತ್ರಿವಾರಂ ವದೇಯುಃ ॥)

ಶ್ರಿಯೇ ಜಾತಃ ಕಾಣ್ವಋಷಿಃ । ತ್ರಿಷ್ಟುಪ್ ಛಂದಃ । ಪವಮಾನಃ ಸೋಮೋದೇವತಾ । ಪುಣ್ಯಾಹವಾಚನೇ ವಿನಿಯೋಗಃ ॥

**ಓಂ ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ । ಶ್ರಿಯಂ**

**ವಸಾನಾ ಅಮೃತತ್ವಮಾಯನ್ನವಂತಿ ಸತ್ಯಾ ಸಮಿಥಾ ಮಿತದ್ರೌ ॥ ಶ್ರಿಯ ಏವೈನಂ ತಚ್ಛ್ರಿಯಮಾದಧಾತಿ। ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

ಮಹ್ಯಂ ಸಹಕುಟುಂಬಿನೇ ಮಹಾಜನಾನ್ನಮಸ್ಕುರ್ವಾಣಾಯ ಆಶೀರ್ವಚನಮಪೇಕ್ಷಮಾಣಾಯ ಅದ್ಯ ....... ಕರ್ಮ ಕರಿಷ್ಯಮಾಣಾಯ ......ಶರ್ಮಣೇ ಶ್ರೀರಸ್ತ್ವಿತಿ ಭವಂತೋ ಬ್ರುವಂತು ॥ [ಅಸ್ತು ಶ್ರೀಃ ॥] (ಇತಿ ತ್ರಿವಾರಂ ಪಠೇಯುಃ ॥)

ವರ್ಷಶತಂ ಪರಿಪೂರ್ಣಮಸ್ತು । ಶಿವಂ ಶಿವಮಸ್ತು ॥ ಗೋತ್ರಾಭಿವೃದ್ಧಿರಸ್ತು। ಕರ್ಮಾಂಗದೇವತಾಃ ಪ್ರೀಯಂತಾಮ್ ॥

ಶುಕ್ರೇಭಿರಂಗೈರ್ವಿಶ್ವಾಮಿತ್ರಋಷಿಃ । ತ್ರಿಷ್ಟುಪ್‌ಛಂದಃ । ಅಗ್ನಿರ್ದೇವತಾ । ಕಲಶಾಭಿಮರ್ಶನೇ ವಿನಿಯೋಗಃ ॥

**ಓಂ ಶುಕ್ರೇಭಿರಂಗೈ ರಜ ಆತತನ್ವಾನ್ ಕ್ರತುಂ ಪುನಾನಃ ಕವಿಭಿಃ ಪವಿತ್ರೈಃ। ಶೋಚಿರ್ವಸಾನಃ ಪರ್ಯಾಯುರಪಾಂ ಶ್ರಿಯೋ ಮಿಮೀತೇ ಬೃಹತೀರನೂನಾಃ ॥ ಓಮ್ ॥ ತದಪ್ಯೇಷ ಶ್ಲೋಕೋಽಭಿಗೀತಃ॥ ಮರುತಃ ಪರಿವೇಷ್ಟಾರೋ ಮರುತ್ತಸ್ಯಾವಸನ್ ಗೃಹೇ । ಆವಿಕ್ಷತಸ್ಯ ಕಾಮಪ್ರೇರ್ವಿಶ್ವೇದೇವಾಃ ಸಭಾಸದ** ॥ ಇತಿ ॥

(ತತ ಉತ್ತರಕಲಶಂ ದಕ್ಷಿಣಹಸ್ತೇ ದಕ್ಷಿಣಕಲಶಂ ವಾಮಹಸ್ತೇ ಗೃಹೀತ್ವಾ ತಾಭ್ಯಾಂ ಧಾರಾದ್ವಯಂ ಸಂತತಂ ಪಾತ್ರೇ ನಿಷಿಂಚೇತ್ ಏಭಿರ್ಮಂತ್ರೈಃ)

ವಾಸ್ತೋಷ್ಪತೇ ಚತಸೃಣಾಂ ಮೈತ್ರಾವರುಣಿಃಋಷಿಃ । ತ್ರಿಷ್ಟುಪ್‌ಛಂದಃ । ವಾಸ್ತೋಷ್ಪತಿರ್ದೇವತಾ । ಅಂತ್ಯಾ ಗಾಯತ್ರೀ । ಕಲಶಜಲಸೇಚನೇ ವಿನಿಯೋಗಃ ॥

**ಓಂ ವಾಸ್ತೋಷ್ಪತೇ ಪ್ರತಿ ಜಾನೀಹ್ಯಸ್ಮಾನ್ ತ್ಸ್ವಾವೇಶೋ ಅನಮೀವೋ ಭವಾ ನಃ । ಯತ್ತ್ವೇಮಹೇ ಪ್ರತಿ ತನ್ನೋ ಜುಷಸ್ವ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ॥ ವಾಸ್ತೋಷ್ಪತೇ ಪ್ರತರಣೋ ನ ಏಧಿ ಗಯಸ್ಫಾನೋ ಗೋಭಿರಶ್ವೇಭಿರಿಂದೋ । ಅಜರಾಸಸ್ತೇ ಸಖ್ಯೇ ಸ್ಯಾಮ ಪಿತೇವ ಪುತ್ರಾನ್ ಪ್ರತಿ ನೋ ಜುಷಸ್ವ ॥ ವಾಸ್ತೋಷ್ಪತೇ ಶಗ್ಮಯಾ ಸಂಸದಾ ತೇ ಸಕ್ಷೀಮಹಿ ರಣ್ವಯಾ ಗಾತುಮತ್ಯಾ। ಪಾಹಿ ಕ್ಷೇಮ ಉತ ಯೋಗೇ ವರಂ ನೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ಅಮೀವಹಾ ವಾಸ್ತೋಷ್ಪತೇ ವಿಶ್ವಾ ರೂಪಾಣ್ಯಾವಿಶನ್ । ಸಖಾ ಸುಶೇವ ಏಧಿ ನಃ ॥**

ಶುಭಂ ಶುಭಂ ಶುಭಮ್ ॥ (ಶಿವಂ ಶಿವಂ ಶಿವಮ್ ॥)

## ಮಾರ್ಜನಮ್

ತತೋ ಯಜಮಾನಸ್ಯ ವಾಮತಃ[೨೧] ಪತ್ನೀಮುಪವೇಶ್ಯ ಪಾತ್ರಪತಿತಜಲೇನ ಪಲ್ಲವಕುಶೈರುದಙ್ಮುಖಾಸ್ತಿಷ್ಠಂತೋ ವಿಪ್ರಾ ಅಭಿಷಿಂಚೇಯುಃ ॥

ಆಪೋ ಹಿ ಷ್ಠೇತಿ ನವರ್ಚಸ್ಯ ಅಂಬರೀಷ ಸಿಂಧುದ್ವೀಪಋಷಿಃ । ಆಪೋ ಹಿ ಷ್ಠೇತಿ ತಿಸೃಣಾಂ ದೈವೀ ಗಾಯತ್ರೀಛಂದಃ । ಶಂ ನೋ ದೇವೀತ್ಯಸ್ಯಾಃ ಗಾಯತ್ರೀಛಂದಃ । ಈಶಾನಾ ವಾರ್ಯಾಣಾಮಿತ್ಯಸ್ಯಾಃ ವರ್ಧಮಾನಾ ಗಾಯತ್ರೀ ಛಂದಃ । ಆಪಃ ಪೃಣೀತೇತ್ಯಸ್ಯಾಃ ಪ್ರತಿಷ್ಠಾ ಗಾಯತ್ರೀಛಂದಃ । ಇದಮಾಪಃ, ಆಪೋ ಅದ್ಯೇತ್ಯನಯೋಃ ಅನುಷ್ಟುಪ್‌ಛಂದಃ । ಆಪೋದೇವತಾಃ । ಅಭಿಮಂತ್ರಣೇ ವಿನಿಯೋಗಃ ॥

ಓಮ್ ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ॥ ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇಹ ನಃ । ಉಶತೀರಿವ ಮಾತರಃ ॥ ತಸ್ಮಾ ಅರಂ ಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ । ಆಪೋ ಜನಯಥಾ ಚ ನಃ ॥ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿ ಸ್ರವಂತು ನಃ ॥ ಈಶಾನಾ ವಾರ್ಯಾಣಾಂ ಕ್ಷಯಂತೀಶ್ಚರ್ಷಣೀನಾಮ್ । ಅಪೋ ಯಾಚಾಮಿ ಭೇಷಜಮ್ ॥ ಅಪ್ಸು ಮೇ ಸೋಮೋ ಅಬ್ರವೀದಂತರ್ವಿಶ್ವಾನಿ ಭೇಷಜಾ । ಅಗ್ನಿಂ ಚ ವಿಶ್ವಶಂಭುವಮ್ ॥ ಆಪಃ ಪೃಣೀತ ಭೇಷಜಂ ವರೂಥಂ ತನ್ವೇ೩ ಮಮ । ಜ್ಯೋಕ್ ಚ ಸೂರ್ಯಂ ದೃಶೇ ॥ ಇದಮಾಪಃ ಪ್ರ ವಹತ ಯತ್ಕಿಂ ಚ ದುರಿತಂ ಮಯಿ । ಯದ್ವಾಹಮಭಿದುದ್ರೋಹ ಯದ್ವಾ ಶೇಪ ಉತಾನೃತಮ್ ॥ ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ । ಪಯಸ್ವಾನಗ್ನ ಆ ಗಹಿ ತಂ ಮಾ ಸಂ ಸೃಜ ವರ್ಚಸಾ ॥

ಆ ನೋ ಭದ್ರಾಃ, ದೇವಾನಾಂ ಭದ್ರೇತ್ಯನಯೋಃ ರಾಹೂಗಣೋ ಗೋತಮಋಷಿಃ । ಜಗತೀಛಂದಃ । ವಿಶ್ವೇದೇವಾದೇವತಾಃ । ಅಭಿಮಂತ್ರಣೇ ವಿನಿಯೋಗಃ ॥

ಓಮ್ ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತೋಽದಬ್ಧಾಸೋ ಅಪರೀತಾಸ ಉದ್ಭಿದಃ । ದೇವಾ ನೋ ಯಥಾ ಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇದಿವೇ ॥ ದೇವಾನಾಂ ಭದ್ರಾ ಸುಮತಿರ್ಋಜೂಯತಾಂ ದೇವಾನಾಂ ರಾತಿರಭಿ ನೋ ನಿ ವರ್ತತಾಮ್ । ದೇವಾನಾಂ ಸಖ್ಯಮುಪ ಸೇದಿಮಾ ವಯಂ ದೇವಾ ನ ಆಯುಃ ಪ್ರ ತಿರಂತು ಜೀವಸೇ ॥

---

೨೧. ಸರ್ವೇಷು ಧರ್ಮಕಾರ್ಯೇಷು ಪತ್ನೀ ದಕ್ಷಿಣತಸ್ಥಿತಾ । ಆಶೀರ್ವಚನಕಾಲೇ ತು ನಿತ್ಯೌಪಾಸನಮಾರ್ಜನೇ ।
ಏತೇಷು ವಾಮತಸ್ತಿಷ್ಠೇತ್ ವಧೂರನ್ಯತ್ರ ದಕ್ಷಿಣೇ । ಎಲ್ಲಾ ಧರ್ಮಕಾರ್ಯದಲ್ಲಿ ಪುರೋಹಿತರ ಬಲಭಾಗದಲ್ಲಿ ಯಜಮಾನನು, ಅವನ ಬಲಭಾಗದಲ್ಲಿ ಅವನ ಪತ್ನಿಯು ಕುಳಿತುಕೊಳ್ಳಬೇಕು. ಆಶೀರ್ವಾದ ಮಾಡುವಾಗ, ನಿತ್ಯೌಪಾಸನ ಸಮಯದಲ್ಲಿ, ಕಲಶಮಾರ್ಜನ ಮಾಡುವಾಗ ಪತ್ನಿಯು ಯಜಮಾನನ ಎಡಭಾಗದಲ್ಲಿ ಕುಳಿತುಕೊಳ್ಳಬೇಕು.

ಅಪ ನಃ ಶೋಶುಚದಘಮಿತ್ಯಷ್ಟರ್ಚಸ್ಯ ಆಂಗಿರಸಃ ಕುತ್ಸೋಋಷಿಃ । ಗಾಯತ್ರೀಛಂದಃ । ಅಗ್ನಿರ್ದೇವತಾ। ಅಷ್ಟದಿಕ್‌ಪ್ರೋಕ್ಷಣೇ ವಿನಿಯೋಗಃ ॥

**ಓಮ್ ಅಪ ನಃ ಶೋಶುಚದಘಮಗ್ನೇ ಶುಶುಗ್ಧ್ಯಾ ರಯಿಮ್ । ಅಪ ನಃ ಶೋಶುಚದಘಮ್ ॥** (ಪ್ರಾಚ್ಯಾಂ) **ಸುಕ್ಷೇತ್ರಿಯಾ ಸುಗಾತುಯಾ ವಸೂಯಾ ಚ ಯಜಾಮಹೇ । ಅಪ ನಃ ಶೋಶುಚದಘಮ್ ॥** (ಆಗ್ನೇಯ್ಯಾಂ) **ಪ್ರ ಯದ್ ಭಂದಿಷ್ಠ ಏಷಾಂ ಪ್ರಾಸ್ಮಾಕಾಸಶ್ಚ ಸೂರಯಃ । ಅಪ ನಃ ಶೋಶುಚದಘಮ್ ॥** (ದಕ್ಷಿಣಸ್ಯಾಂ, ಅಪ ಉಪಸ್ಪೃಶ್ಯ) **ಪ್ರ ಯತ್ ತೇ ಅಗ್ನೇ ಸೂರಯೋ ಜಾಯೇಮಹಿ ಪ್ರ ತೇ ವಯಮ್ । ಅಪ ನಃ ಶೋಶುಚದಘಮ್ ॥** (ನೈರ್ಋತ್ಯಾಂ, ಅಪ ಉಪಸ್ಪೃಶ್ಯ) **ಪ್ರ ಯದಗ್ನೇಃ ಸಹಸ್ವತೋ ವಿಶ್ವತೋ ಯಂತಿ ಭಾನವಃ । ಅಪ ನಃ ಶೋಶುಚದಘಮ್ ॥** (ವಾರುಣ್ಯಾಂ) **ತ್ವಂ ಹಿ ವಿಶ್ವತೋಮುಖ ವಿಶ್ವತಃ ಪರಿಭೂರಸಿ । ಅಪ ನಃ ಶೋಶುಚದಘಮ್ ॥** (ವಾಯವ್ಯಾಂ) **ದ್ವಿಷೋ ನೋ ವಿಶ್ವತೋಮುಖಾತಿ ನಾವೇವ ಪಾರಯ । ಅಪ ನಃ ಶೋಶುಚದಘಮ್ ॥** (ಉತ್ತರಸ್ಯಾಂ) **ಸ ನಃ ಸಿಂಧುಮಿವ ನಾವಯಾತಿ ಪರ್ಷಾ ಸ್ವಸ್ತಯೇ । ಅಪ ನಃ ಶೋಶುಚದಘಮ್ ॥** (ಐಶಾನ್ಯಾಮ್ ॥)

ಕಯಾ ನಶ್ಚಿತ್ರ ಇತಿ ತಿಸೃಣಾಂ ವಾಮದೇವೋ ಗೌತಮಋಷಿಃ । ಗಾಯತ್ರೀಛಂದಃ । ತೃತೀಯಾ ಪಾದನಿಚೃತ್ । ಇಂದ್ರೋದೇವತಾ ।ಪರಿತಃ ಪ್ರೋಕ್ಷಣೇ ವಿನಿಯೋಗಃ ॥

**ಓಂ ಕಯಾ ನಶ್ಚಿತ್ರ ಆ ಭುವದೂತೀ ಸದಾವೃಧಃ ಸಖಾ । ಕಯಾ ಶಚಿಷ್ಠಯಾ ವೃತಾ ॥ ಕಸ್ತ್ವಾ ಸತ್ಯೋ ಮದಾನಾಂ ಮಂಹಿಷ್ಠೋ ಮತ್ಸದಂಧಸಃ । ದೃಹ್ಲಾ ಚಿದಾರುಜೇ ವಸು ॥ ಅಭೀ ಷು ಣಃ ಸಖೀನಾಮವಿತಾ ಜರಿತೄಣಾಮ್ । ಶತಂ ಭವಾಸ್ಯೂತಿಭಿಃ ॥**

ಏತೋ ನ್ವಿಂದ್ರಮಿತಿ ತೃಚಸ್ಯ ತಿರಶ್ಚೀರಾಂಗಿರಸಋಷಿಃ । ಅನುಷ್ಟುಪ್‌ಛಂದಃ । ಇಂದ್ರೋದೇವತಾ ॥ ದ್ರವ್ಯಪ್ರೋಕ್ಷಣೇ ವಿನಿಯೋಗಃ ॥

**ಓಮ್ ಏತೋ ನ್ವಿಂದ್ರಂ ಸ್ತವಾಮ ಶುದ್ಧಂ ಶುದ್ಧೇನ ಸಾಮ್ನಾ । ಶುದ್ಧೈರುಕ್ಥೈರ್ವಾವೃಧ್ವಾಂಸಂ ಶುದ್ಧ ಆಶೀರ್ವಾನ್ ಮಮತ್ತು ॥ ಇಂದ್ರ ಶುದ್ಧೋ ನ ಆ ಗಹಿ ಶುದ್ಧಃ ಶುದ್ಧಾಭಿರೂತಿಭಿಃ । ಶುದ್ಧೋ ರಯಿಂ ನಿ ಧಾರಯ ಶುದ್ಧೋ ಮಮದ್ಧಿ ಸೋಮ್ಯಃ ॥ ಇಂದ್ರ ಶುದ್ಧೋ ಹಿ ನೋ ರಯಿಂ ಶುದ್ಧೋ ರತ್ನಾನಿ ದಾಶುಷೇ । ಶುದ್ಧೋ ವೃತ್ರಾಣಿ ಜಿಘ್ನಸೇ ಶುದ್ಧೋ ವಾಜಂ ಸಿಷಾಸಸಿ ॥**

ಸ್ವಾದಿಷ್ಠಯೇತಿ ದಶರ್ಚಸ್ಯ ವೈಶ್ವಾಮಿತ್ರಃ ಮಧುಚ್ಛಂದಾಃಋಷಯಃ । ಗಾಯತ್ರೀಛಂದಃ । ಪವಮಾನಃ ಸೋಮೋದೇವತಾ । ಕರ್ತೃಪ್ರೋಕ್ಷಣೇ ವಿನಿಯೋಗಃ ॥

ಓಂ ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ । ಇಂದ್ರಾಯ ಪಾತವೇ ಸುತಃ ॥
ರಕ್ಷೋಹಾ ವಿಶ್ವಚರ್ಷಣಿರಭಿ ಯೋನಿಮಯೋಹತಮ್ । ದ್ರುಣಾ ಸಧಸ್ಥಮಾಸದತ್ ॥
ವರಿವೋಧಾತಮೋ ಭವ ಮಂಹಿಷ್ಠೋ ವೃತ್ರಹಂತಮಃ । ಪರ್ಷಿ ರಾಧೋ ಮಘೋನಾಮ್ ॥
ಅಭ್ಯರ್ಷ ಮಹಾನಾಂ ದೇವಾನಾಂ ವೀತಿಮಂಧಸಾ । ಅಭಿ ವಾಜಮುತ ಶ್ರವಃ ॥ ತ್ವಾಮಚ್ಛಾ
ಚರಾಮಸಿ ತದಿದರ್ಥಂ ದಿವೇದಿವೇ । ಇಂದೋ ತ್ವೇ ನ ಆಶಸಃ ॥ ೧ ॥ ಪುನಾತಿ ತೇ ಪರಿಸ್ರುತಂ
ಸೋಮಂ ಸೂರ್ಯಸ್ಯ ದುಹಿತಾ । ವಾರೇಣ ಶಶ್ವತಾ ತನಾ । ತಮೀಮಣ್ವೀಃ ಸಮರ್ಯ ಆ
ಗೃಭ್ಣಂತಿ ಯೋಷಣೋ ದಶ । ಸ್ವಸಾರಃ ಪಾರ್ಯೇ ದಿವಿ ॥ ತಮೀಂ ಹಿನ್ವಂತ್ಯಗ್ರುವೋ ಧಮಂತಿ
ಬಾಕುರಂ ದೃತಿಮ್ । ತ್ರಿಧಾತು ವಾರಣಂ ಮಧು ॥ ಅಭೀಂಮಮಘ್ನ್ಯಾ ಉತ ಶ್ರೀಣಂತಿ ಧೇನವಃ
ಶಿಶುಮ್ । ಸೋಮಮಿಂದ್ರಾಯ ಪಾತವೇ ॥ ಅಸ್ಯೇದಿಂದ್ರೋ ಮದೇಷ್ವಾ ವಿಶ್ವಾ ವೃತ್ರಾಣಿ ಜಿಘ್ನತೇ ।
ಶೂರೋ ಮಘಾ ಚ ಮಂಹತೇ ॥ ೨ ॥

ಆಪಃ ಪುನಂತ್ವಿತ್ಯಸ್ಯ ಪೂತಋಷಿಃ । ಅಷ್ಟಿಚ್ಛಂದಃ । ಆಪೋದೇವತಾಃ । ಕರ್ತೃಪ್ರೋಕ್ಷಣೇ ವಿನಿಯೋಗಃ ॥

ಓಮ್ ಆಪಃ ಪುನಂತು ಪೃಥಿವೀಂಪೃಥಿವೀ ಪೂತಾ ಪುನಾತು ಮಾಮ್ । ಪುನಂತು ಬ್ರಹ್ಮಣಸ್ಪತಿರ್ಬ್ರಹ್ಮಪೂತಾ ಪುನಾತು ಮಾಮ್ ॥

ತರತ್ಸ ಮಂದೀತ್ಯಾದಿ ಚತಸೃಣಾಂ ಕಾಶ್ಯಪೋಽವತ್ಸಾರಋಷಿಃ । ಗಾಯತ್ರೀಛಂದಃ । ಪವಮಾನಃ ಸೋಮೋದೇವತಾ । ಕರ್ತೃಪ್ರೋಕ್ಷಣೇ ವಿನಿಯೋಗಃ ॥

ಓಂ ತರತ್ ಸ ಮಂದೀ ಧಾವತಿ ಧಾರಾ ಸುತಸ್ಯಾಂಧಸಃ । ತರತ್ ಸ ಮಂದೀ ಧಾವತಿ ॥ ಉಸ್ರಾ ವೇದ ವಸೂನಾಂ ಮರ್ತಸ್ಯ ದೇವ್ಯವಸಃ । ತರತ್ ಸ ಮಂದೀ ಧಾವತಿ ॥ ಧ್ವಸ್ರಯೋಃ ಪುರುಷಂತ್ಯೋರಾ ಸಹಸ್ರಾಣಿ ದದ್ಮಹೇ । ತರತ್ ಸ ಮಂದೀ ಧಾವತಿ ॥ ಆ ಯಯೋಸ್ತ್ರಿಂಶತಂ ತನಾ ಸಹಸ್ರಾಣಿ ಚ ದದ್ಮಹೇ । ತರತ್ ಸ ಮಂದೀ ಧಾವತಿ ॥

ಶುಚೀ ವೋ ಹವ್ಯಾ ಮೈತ್ರಾವರುಣಿರ್ವಸಿಷ್ಠಋಷಿಃ । ತ್ರಿಷ್ಟುಪ್ ಛಂದ । ಮರುತಃದೇವತಾಃ । ಕರ್ತೃಪ್ರೋಕ್ಷಣೇ ವಿನಿಯೋಗಃ ॥

ಓಂ ಶುಚೀ ವೋ ಹವ್ಯಾ ಮರುತಃ ಶುಚೀನಾಂ ಶುಚಿಂ ಹಿನೋಮ್ಯಧ್ವರಂ ಶುಚಿಭ್ಯಃ । ಋತೇನ ಸತ್ಯಮೃತಸಾಪ ಆಯಞ್ಛುಚಿಜನ್ಮಾನಃ ಶುಚಯಃ ಪಾವಕಾಃ ॥

ಯದಂತಿ ಯಚ್ಚೇತಿ ದ್ವಾದಶರ್ಚಾನಾಂ ಮೈತ್ರಾವರುಣಿರ್ವಸಿಷ್ಠ ಋಷಿಃ । ಗಾಯತ್ರೀ ಛಂದಃ । ಅಲಾಯ್ಯಸ್ಯ ಪುರ ಉಷ್ಣಿಕ್, ಪುನಂತು ಮಾಂ, ಯಃ ಪಾವಮಾನೀಃ, ಪಾವಮಾನೀರ್ಯ ಇತ್ಯಾಸಾಮನುಷ್ಟುಪ್ । ಸೋಮಃ ಪವಮಾನೋ ದೇವತಾ । ಯತ್ತೇ ಪವಿತ್ರಮಿತಿ ದ್ವಯೋಃ ಅಗ್ನಿಃ ಪವಮಾನೋ ದೇವತಾ । ಉಭಾಭ್ಯಾಂ ದೇವ ಸವಿತಃ ಸವಿತಾ ಪವಮಾನೋ ದೇವತಾ । ತ್ರಿಭಿಷ್ಟ್ವಂ ದೇವ ಸವಿತಃ ಅಗ್ನಿಸವಿತಾರೌ ಪವಮಾನೋ ದೇವತಾ । ಪುನಂತು ಮಾಂ ವಿಶ್ವೇದೇವಾಃ ದೇವತಾಃ । ಯಃ ಪಾವಮಾನೀಃ ಪಾವಮಾನೀರ್ಯ ಇತ್ಯನಯೋಃ ಪಾವಮಾನ್ಯಧ್ಯೇತಾ ದೇವತಾ । ಕರ್ತೃಪ್ರೋಕ್ಷಣೇ ವಿನಿಯೋಗಃ ॥

**ಓಂ ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ । ಪವಮಾನ ವಿ ತಜ್ಜಹಿ ॥ ಪವಮಾನಃ ಸೋ ಅದ್ಯ ನಃ ಪವಿತ್ರೇಣ ವಿಚರ್ಷಣಿಃ । ಯಃ ಪೋತಾ ಸ ಪುನಾತು ನಃ ॥ ಯತ್ ತೇ ಪವಿತ್ರ ಮರ್ಚಿಷ್ಯಗ್ನೇ ವಿತತಮಂತರಾ। ಬ್ರಹ್ಮ ತೇನ ಪುನೀಹಿ ನಃ ॥ ಯತ್ ತೇ ಪವಿತ್ರಮರ್ಚಿವದಗ್ನೇ ತೇನ ಪುನೀಹಿ ನಃ । ಬ್ರಹ್ಮಸವೈಃ ಪುನೀಹಿ ನಃ ॥ ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ । ಮಾಂ ಪುನೀಹಿ ವಿಶ್ವತಃ ॥ ತ್ರಿಭಿಷ್ಟ್ವಂ ದೇವ ಸವಿತರ್ವರ್ಷಿಷ್ಠೈಃ ಸೋಮ ಧಾಮಭಿಃ। ಅಗ್ನೇ ದಕ್ಷೈಃ ಪುನೀಹಿ ನಃ ॥ ಪುನಂತು ಮಾಂ ದೇವಜನಾಃ ಪುನಂತು ವಸವೋ ಧಿಯಾ । ವಿಶ್ವೇ ದೇವಾಃ ಪುನೀತ ಮಾ ಜಾತವೇದಃ ಪುನೀಹಿಮಾ ॥ ಪ್ರ ಪ್ಯಾಯಸ್ವ ಪ್ರ ಸ್ಯಂದಸ್ವ ಸೋಮ ವಿಶ್ವೇಭಿರಂಶುಭಿಃ । ದೇವೇಭ್ಯ ಉತ್ತಮಂ ಹವಿಃ ॥ ಉಪ ಪ್ರಿಯಂ ಪನಿಪ್ನತಂ ಯುವಾನಮಾಹುತೀವೃಧಮ್ । ಅಗನ್ಮ ಬಿಭ್ರತೋ ನಮಃ ॥ ಅಲಾಯ್ಯಸ್ಯ ಪರಶುರ್ನನಾಶ ತಮಾ ಪವಸ್ವ ದೇವ ಸೋಮ । ಆಖುಂ ಚಿದೇವ ದೇವ ಸೋಮ ॥ ಯಃ ಪಾವಮಾನೀರಧ್ಯೇತ್ಯೃಷಿಭಿಃ ಸಂಭೃತಂ ರಸಮ್ । ಸರ್ವಂ ಸ ಪೂತಮಶ್ನಾತಿ ಸ್ವದಿತಂ ಮಾತರಿಶ್ವನಾ ॥ ಪಾವಮಾನೀರ್ಯೋ ಅಧ್ಯೇತ್ಯೃಷಿಭಿಃ ಸಂಭೃತಂ ರಸಮ್। ತಸ್ಮೈ ಸರಸ್ವತೀ ದುಹೇ ಕ್ಷೀರಂ ಸರ್ಪಿರ್ಮಧೂದಕಮ್ ॥ ಪಾವಮಾನೀಃ ಸ್ವಸ್ತ್ಯಯನೀರ್ಯಾಭಿರ್ಗಚ್ಛತಿ ನಾಂದನಮ್ । ಪುಣ್ಯಾಂಶ್ಚ ಭಕ್ಷಾನ್ ಭಕ್ಷಯತ್ಯಮೃತತ್ವಂ ಚ ಗಚ್ಛತಿ ॥**

ಅಗ್ನಿಃ ಶುಚಿವ್ರತತಮ ಉದಗ್ನೇ ಶುಚಯ ಇತಿ ದ್ವಯೋಃ ವಿರೂಪ ಆಂಗಿರಸಋಷಿಃ। ಗಾಯತ್ರೀಛಂದಃ। ಅಗ್ನಿರ್ದೇವತಾ। ಕರ್ತೃಪ್ರೋಕ್ಷಣೇ ವಿನಿಯೋಗಃ ॥

**ಓಮ್ ಅಗ್ನಿಃ ಶುಚಿವ್ರತತಮಃ ಶುಚಿರ್ವಿಪ್ರಃ ಶುಚಿಃ ಕವಿಃ । ಶುಚೀ ರೋಚತ ಆಹುತಃ ॥**

**ಓಮ್ ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಂಷ್ಯರ್ಚಯಃ ॥**

(ಎಲ್ಲಾ ಕರ್ಮಾಂಗಗಳಲ್ಲಿ ಪುಣ್ಯಾಹವಾಚನದಲ್ಲಿ ಮಾರ್ಜನಾನಂತರ ಆಶೀರ್ವಚನದ ಮೊದಲು ನಾಂದೀ ಸಮಾರಾಧನೆ ಮಾಡಿಕೊಂಡು ಅನಂತರ ಪುಣ್ಯಾಹವಾಚನೆಯ ಕೃಷ್ಣಾರ್ಪಣಬಿಡುವ ಸಂಪ್ರದಾಯವಿದೆ.)

ಏಷ ವಾಂ ತಂ ಯುವಮಿತ್ಯನಯೋಃ ವಾಮದೇವೋ ಗೌತಮಋಷಿಃ । ಗಾಯತ್ರೀಛಂದಃ । ಅಶ್ವಿನೌದೇವತೇ । ಆಶೀರ್ವಚನೇ ವಿನಿಯೋಗಃ ॥

**ಓಮ್ ಏಷ ವಾಂ ದೇವಾವಶ್ವಿನಾ ಕುಮಾರಃ ಸಾಹದೇವ್ಯಃ । ದೀರ್ಘಾಯುರಸ್ತು ಸೋಮಕಃ ॥ ತಂ ಯುವಂ ದೇವಾವಶ್ವಿನಾ ಕುಮಾರಂ ಸಾಹದೇವ್ಯಮ್ । ದೀರ್ಘಾಯುಷಂ ಕೃಣೋತನ ॥ ಸರ್ವಸ್ಯಾಽಽಪ್ತ್ಯೈ ಸರ್ವಸ್ಯ ಜಿತ್ಯೈ ಸರ್ವಮೇವ ತೇನಾಽಽಪ್ನೋತಿ ಸರ್ವಂ ಜಯತಿ ॥**

ಉತ್ತರಪೂಜಾಂ ಕರಿಷ್ಯೇ ॥ (ಧ್ಯಾನಾವಾಹನಾದಿಷೋಡಶೋಪಚಾರಪೂಜಾಂ ಕೃತ್ವಾ)

ಕರ್ಮಸಾಂಗತಾಸಿದ್ಧ್ಯರ್ಥಂ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಾಮಿ ॥

**ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।**<br>
**ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥**

(ಆಚಾರ್ಯಃ [ಅಸ್ತು ಪ್ರತಿಪಾದಯ । ಕರ್ಮಸಾಂಗತಾಸಿದ್ಧಿರಸ್ತು ।] ಇತಿ ಬ್ರೂಯಾತ್ ॥)

ಅನೇನ ಸ್ವಸ್ತಿಪುಣ್ಯಾಹವಾಚನೇನ ಭಗವಾನ್ ಸರ್ವಾಂತರ್ಯಾಮೀ (ಮಧ್ವಾಂತರ್ಗತಃ) ಶ್ರೀಲಕ್ಷ್ಮೀ-ನಾರಾಯಣಃ ಪ್ರೀಯತಾಮ್ ॥

**ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಮ್ ।**<br>
**ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ ॥**

ಆವಾಹಿತದೇವತಾಭ್ಯೋ ನಮಃ । ಯಥಾಸ್ಥಾನಮುದ್ವಾಸಯಾಮಿ ॥

ಆಪ ಇದ್ವಾ ಉ ಜಮದಗ್ನಿಋಷಿಃ । ಅನುಷ್ಟುಪ್‌ಛಂದಃ । ವಿಶ್ವೇದೇವಾದೇವತಾಃ । ಪುಣ್ಯಾಹತೀರ್ಥ ಪ್ರಾಶನೇ ವಿನಿಯೋಗಃ ॥

**ಓಮ್ ಆಪ ಇದ್ವಾ ಉ ಭೇಷಜೀರಾಪೋ ಅಮೀವಚಾತನೀಃ । ಆಪಃ ಸರ್ವಸ್ಯ ಭೇಷಜೀಸ್ತಾಸ್ತೇ ಕೃಣ್ವಂತು ಭೇಷಜಮ್ ॥**

॥ ಇತಿ ಪುಣ್ಯಾಹವಿಧಿಃ ಸಂಪೂರ್ಣಃ ॥

# ॥ ನಾಂದೀಮುಖಮ್ ॥

## ನಾಂದೀಶ್ರಾದ್ಧ

**ಅಥಾಭ್ಯುದಯಿಕಂ ಶ್ರಾದ್ಧಮಹಂ ವಕ್ಷ್ಯಾಮಿ ಶೌನಕ ।**
**ಭವೇದಭ್ಯುದಯಂ ಶ್ರಾದ್ಧಂ ವೃದ್ಧಿಪೂರ್ವೇಷು ಕರ್ಮಸು ॥** –ಪ್ರ.ಪಾ.

ಗರ್ಭಾಧಾನಾದಿ ಷೋಡಶಕರ್ಮಗಳಲ್ಲಿಯೂ, ಯಜ್ಞ-ಯಾಗಾದಿಗಳಲ್ಲಿಯೂ, ದೇವತಾಪ್ರತಿಷ್ಠೆಗಳಲ್ಲಿಯೂ, ದೇವಾಲಯ, ಗೃಹಪ್ರವೇಶವೇ ಮೊದಲಾದ ಶುಭಕರ್ಮಗಳಲ್ಲಿಯೂ ಅದರ ಪೂರ್ವದಿನದಲ್ಲಿ (ಅಥವಾ ಅದೇ ದಿನ ಮೊದಲು) ನಾಂದೀಶ್ರಾದ್ಧವನ್ನು ಮಾಡಬೇಕು. ಇಲ್ಲಿ ದೇವಾಲಯಪ್ರವೇಶ, ದೇವತಾಪ್ರತಿಷ್ಠೆ, ಉತ್ಸವಗಳಲ್ಲಿ ಮಾಡುವ ನಾಂದಿ ದೇವನಾಂದಿ.

**ಅನಿಷ್ಟ್ವಾ ತು ಪಿತೄನ್ ಶ್ರಾದ್ಧೇ ವೈದಿಕಂ ಕರ್ಮ ನಾಚರೇತ್ ॥** –ಭೋ.ಗೃ.ಸ.

ನಾಂದೀಶ್ರಾದ್ಧವನ್ನು ಮಾಡದೆ ಬೇರೆ ವೇದೋಕ್ತಕರ್ಮಗಳನ್ನು ಮಾಡಬಾರದು.

**ತಸ್ಮಾತ್ಪಿತೃಭ್ಯಃ ಪೂರ್ವೇದ್ಯುಃ ಕ್ರಿಯತೇ ।** –ಶ್ರುತಿ

ಆದ್ದರಿಂದ ಎಲ್ಲಾ ಕರ್ಮ ಮಾಡುವಾಗಲೂ ಅದಕ್ಕಿಂತ ಮೊದಲು ನಾಂದೀ ಶ್ರಾದ್ಧವನ್ನು ಮಾಡಲೇಬೇಕು. ನಾಂದಿ ಮಾಡುವಾಗಲೂ ಮೊದಲು ಗೌರ್ಯಾದಿಷೋಡಶ, ಬ್ರಾಹ್ಮ್ಯಾದಿ ಸಪ್ತಮಾತೃಕಾಪೂಜೆ ಮಾಡಿಕೊಂಡು ಮಾಡಬೇಕು. ಈ ನಾಂದೀಶ್ರಾದ್ಧದಲ್ಲಿ ಮೊದಲು ವಿಶ್ವೇದೇವತೆಗಳಿಗೂ, ಅನಂತರ ಪಿತೃದೇವತೆಗಳಿಗೂ ವೃದ್ಧಿಶ್ರಾದ್ಧ ವಿಧಾನದಿಂದ ಶ್ರಾದ್ಧ ಮಾಡುವುದು. 'ವಿಶ್ವೇದೇವಾಃ ದಶಸ್ಮೃತಾಃ' ವಿಶ್ವೇದೇವತೆಗಳು ಒಟ್ಟಿಗೆ ಹತ್ತು ಮಂದಿ ಇದ್ದಾರೆ. ಯಾವ ಯಾವ ಶ್ರಾದ್ಧದಲ್ಲಿ ಯಾರ್ಯಾರಿಗೆ ಪೂಜೆ ಮಾಡಬೇಕೆಂದರೆ,

**ಇಷ್ಟಿಶ್ರಾದ್ಧೇ ಕ್ರತುರ್ದಕ್ಷಃ ಸಂಕೀರ್ತ್ಯ ವೈಶ್ವದೇವಕೌ ।**
**ನಾಂದೀಶ್ರಾದ್ಧೇ ಸತ್ಯವಸೂ ಕಾಮ್ಯೇ ಚ ಧುರಿಲೋಚನೌ ॥**

**ಪುರೂರವಾರ್ದ್ರವೌ ಚೈವ ಪಾರ್ವಣೇ ಸಮುದಾಹೃತೌ ।**
**ನೈಮಿತ್ತಿಕೇ ಕಾಲಕಾಮೌ ಏವಂ ಸರ್ವತ್ರ ಕೀರ್ತಯೇತ್ ॥** –ಪ್ರ.ಪಾ.

ಇಷ್ಟಿಶ್ರಾದ್ಧ(ದೊಡ್ಡ ದೊಡ್ಡ) ಯಜ್ಞಗಳಲ್ಲಿ ಕ್ರತು ಹಾಗೂ ದಕ್ಷ, ನಾಂದೀಶ್ರಾದ್ಧದಲ್ಲಿ ಸತ್ಯ ಮತ್ತು ವಸು, ಕಾಮ್ಯ (ಮಹಾಲಯ) ಶ್ರಾದ್ಧದಲ್ಲಿ ಧುರಿ ಮತ್ತು ಲೋಚನ, ಪಾರ್ವಣಶ್ರಾದ್ಧದಲ್ಲಿ ಪುರೂರವ ಮತ್ತು ಆರ್ದ್ರವ, ನೈಮಿತ್ತಿಕ (ತೀರ್ಥಶ್ರಾದ್ಧ, ಗ್ರಹಣಶ್ರಾದ್ಧ, ಸಪಿಂಡೀಕರಣ) ಶ್ರಾದ್ಧದಲ್ಲಿ ಕಾಲ ಮತ್ತು ಕಾಮ ಎಂಬ ವಿಶ್ವೇದೇವತೆಗಳನ್ನು ಪೂಜಿಸಬೇಕು. ನಾಂದೀಶ್ರಾದ್ಧದಲ್ಲಿ ವಿಶ್ವೇದೇವತೆಗಳು ಇಬ್ಬರು. ಮಾತೃವರ್ಗ, ಪಿತೃವರ್ಗ, ಸಪತ್ನೀಕಮಾತಾಮಹವರ್ಗ ಎಂಬುದು ಪಿತೃವರ್ಗ. ಈ ಎಲ್ಲಾ ವರ್ಗಕ್ಕೂ ಯುಗ್ಮ (ಎರಡು) ಬ್ರಾಹ್ಮಣರನ್ನು ಪೂಜಿಸಬೇಕೆಂದಿದೆ. ವಿಶ್ವೇದೇವತೆಗಳಿಗೆ ನಾಲ್ಕು, ನಾಲ್ಕು ಪಿತೃವರ್ಗಕ್ಕೆ ಎಂಟು. ಹೀಗೆ ಒಟ್ಟು ಹನ್ನೆರಡು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕೆಂದಿದೆ. (ಕೆಲವೆಡೆ ಈಗಲೂ ಅಯ್ಯರ್, ಅಯ್ಯಂಗಾರ್‌ಗಳಲ್ಲಿ ಹನ್ನೆರಡು ಜನರಿಗೆ ಭೋಜನ ಮಾಡಿಸುತ್ತಾರೆ.) ಬ್ರಾಹ್ಮಣರು ಇಲ್ಲದಿದ್ದರೆ, ಒಂದು ಹರಿವಾಣದಲ್ಲಿ ಎರಡು ಅಡಿಕೆ ಜೊತೆ ಎರಡು ಕೂರ್ಚಗಳನ್ನು ಇಟ್ಟು ಒಂದರಲ್ಲಿ ವಿಶ್ವೇದೇವತೆಗಳನ್ನೂ, ಇನ್ನೊಂದರಲ್ಲಿ ಪಿತೃಗಳನ್ನೂ ಆವಾಹಿಸಿ, ಅರ್ಘ್ಯಪ್ರದಾನಾದಿಗಳನ್ನು ಮಾಡಿ ಪೂಜೆಮಾಡಿ, ಇವರ ಭೋಜನಪ್ರತ್ಯಾಮ್ನಾಯ ಪ್ರತ್ಯೇಕ ಎಲೆಯಲ್ಲಾಗಲೀ ಹರಿವಾಣದಲ್ಲಾಗಲೀ ಅಕ್ಕಿ, ತೆಂಗಿನಕಾಯಿ, ತರಕಾರಿ, ಫಲ, ತಾಂಬೂಲಗಳನ್ನಿಟ್ಟು ದಕ್ಷಿಣೆ ಹಿಡಿದುಕೊಂಡು **'ಅಮುಕಸಂಜ್ಞಕಾಃ ವಿಶ್ವೇದೇವಾಃ ನಾಂದೀಶ್ರಾದ್ಧೇ ಯುಗ್ಮಬ್ರಾಹ್ಮಣಭೋಜನಪರ್ಯಾಪ್ತಮಿದಮಾಮಂ ಸೋಪಸ್ಕರಂ ಸತಾಂಬೂಲದಕ್ಷಿಣಾಕಂ**

ಸ್ವಾಹಾ ನ ಮಮ, ಭೂರ್ಭುವಸ್ಸುವರಿಯಂ ಚ ವೃದ್ಧಿಃ' ಎಂದು ನೀರು ಹಾಕಿ ಬಿಡಬೇಕು. ಇದರಂತೆ ಮಾತೃಕಾವರ್ಗಾದಿಗಳಿಗೂ ಬಿಡಬೇಕು. ಇತರ ಕರ್ಮಗಳನ್ನು ಪ್ರಯೋಗದಲ್ಲಿದ್ದಂತೆ ಮಾಡಬೇಕು.

**ಗಣಶಃ ಕ್ರಿಯಮಾಣಾನಾಂ ಮಾತೃಭ್ಯಃ ಪೂಜನಂ ಸಕೃತ್ ।**
**ಸಕೃದೇವ ಭವೇಚ್ಛ್ರಾದ್ಧಮಾದೌ ನ ಪೃಥಕ್ ಪೃಥಕ್ ॥** —ಪ್ರ.ಪಾ.

ಒಂದು ಸಂದರ್ಭದಲ್ಲಿ ಬೇರೆ ಬೇರೆ ಕರ್ಮಗಳನ್ನು ಸಮಾನತಂತ್ರದಿಂದ ಮಾಡುವಾಗಲೂ, ಎರಡು-ಮೂರು ದಿನಗಳಲ್ಲಿ ಅನೇಕ ಹೋಮಗಳನ್ನು ಮಾಡುವುದಿದ್ದರೂ ಕೂಡ ಎಲ್ಲದಕ್ಕೂ ಸೇರಿ ಮೊದಲು ಒಂದೇ ಸಲ ನಾಂದೀಶ್ರಾದ್ಧ. ಬೇರೆ ಬೇರೆ ಕರ್ಮಗಳಿಗೆ ಪ್ರತ್ಯೇಕ ಪ್ರತ್ಯೇಕ ನಾಂದೀಶ್ರಾದ್ಧ ಬೇಡ.

**ನಾಂದೀಶ್ರಾದ್ಧಂ ಪಿತಾ ಕುರ್ಯಾದಾದ್ಯಪಾಣಿಗ್ರಹಾವಧಿ ।**
**ಅತ ಊರ್ಧ್ವಂ ಪ್ರಕುರ್ವೀತ ಸ್ವಯಮೇವ ತು ನಾಂದಿಕಮ್ ॥** —ದೋ.ಗೃ.ಕ.ಸ.

ಈ ನಾಂದೀಶ್ರಾದ್ಧವನ್ನು ಮಕ್ಕಳಿಗೆ ಗರ್ಭಾಧಾನದಿಂದ ವಿವಾಹದವರೆಗೆ ಎಲ್ಲಾ ಷೋಡಶಕರ್ಮಗಳಿಗೂ, ಮಕ್ಕಳಿಗಾಗಿ ಮಾಡುವ ಬೇರೆ ಕಾಮ್ಯಕರ್ಮಗಳಿಗೂ ಕೂಡ ತಂದೆಯೇ ನಾಂದೀಶ್ರಾದ್ಧ ಮಾಡಿ ಕರ್ಮ ಮಾಡಬೇಕು. ಮಗನಿಗೆ ಮದುವೆಯವರೆಗೆ ಮಾತ್ರ, ಎರಡನೆಯ ಮದುವೆ ಆಗಬೇಕಾಗಿದ್ದರೂ ಅಥವಾ ಒಂದನೆಯ ಮದುವೆಯನಂತರ ಇವನು ಮಾಡತಕ್ಕ ಎಲ್ಲಾ ಕರ್ಮಗಳಿಗೂ ಕೂಡ ತಾನೇ ನಾಂದೀಶ್ರಾದ್ಧ ಮಾಡಬೇಕು. ಮಗನೇ ನಾಂದೀಶ್ರಾದ್ಧ ಮಾಡುವ ಸಂದರ್ಭದಲ್ಲಿ ತಂದೆ, ತಾಯಿ ಜೀವಂತರಾಗಿದ್ದರೆ,

**ಏಭ್ಯ ಏವ ಪಿತಾ ದದ್ಯಾತ್ ತೇಭ್ಯೋ ದದ್ಯಾತ್ ಸ್ವಯಂ ಸುತಃ ॥** —ಗೃ.ಕ.ಸ.

ತಂದೆ ಯಾವ ಪಿತೃಗಳಿಗೆ ನಾಂದೀಶ್ರಾದ್ಧ ಮಾಡಿದ್ದಾರೋ ಅದೇ ಪಿತೃಗಳಿಗೆ ಮಗನೂ ಮಾಡಬೇಕು. ಆಗ ಸಂಕಲ್ಪದಲ್ಲಿ 'ಜನಕಸ್ಯ ಮಾತೃಪಿತಾಮಹಿಪ್ರಪಿತಾಮಹ್ಯಃ, ಜನಕಸ್ಯ ಪಿತೃಪಿತಾಮಹಪ್ರಪಿತಾಮಹಾಃ' ಇತ್ಯಾದಿ ಹೇಳಿ ಮಾಡಬೇಕು. ಉಪನಯನ, ವಿವಾಹಾದಿಗಳನ್ನು ಮಾಡುವಾಗ ನಾಂದೀಶ್ರಾದ್ಧ ಮಾಡಲು ಅಧಿಕಾರಿಗಳು ಯಾರು?

**ಪಿತಾ ಪಿತಾಮಹೋ ಭ್ರಾತಾ ಮಾತುಲಃ ಸೋದರಸ್ತಥಾ ।**
**ನಾಂದೀಶ್ರಾದ್ಧೇಽಧಿಕಾರೀ ಸ್ಯಾತ್ ಪೂರ್ವಾಭಾವೇ ಪರಃ ಪರಃ ॥** —ಗೃ.ಕ.ಸ.

ಮಗನಿಗೆ ಕಾರ್ಯ ಮಾಡುವುದಿದ್ದರೆ ತಂದೆ ನಾಂದೀಶ್ರಾದ್ಧ ಮಾಡಬೇಕು. ಅವನು ಇಲ್ಲದಿದ್ದರೆ ತಂದೆಯ ತಂದೆ (ಅಜ್ಜ), ಅವನೂ ಇಲ್ಲದಿದ್ದರೆ ತಂದೆಯ ಅಣ್ಣತಮ್ಮಂದಿರು, ಅವರೂ ಇಲ್ಲದಿದ್ದರೆ ಮಾತುಲ (ಸೋದರ ಮಾವ), ಅವನೂ ಇಲ್ಲದಿದ್ದರೆ ತನ್ನ ಅಣ್ಣ. ಮೇಲೆ ಹೇಳಿದವರು ಇಲ್ಲದಿದ್ದರೆ ಕ್ರಮೇಣ ಕೆಳಗಿನವರು ಅಧಿಕಾರಿಗಳಾಗುತ್ತಾರೆ. ಮಗನಿಗೆ ಉಪನಯನ ಮಾಡಲು ಯಾರು ಯಾರು ಅಧಿಕಾರಿಗಳು?

**ಪಿತೈವೋಪನಯೇತ್ಪುತ್ರಂ ತದಭಾವೇ ಪಿತುಃ ಪಿತಾ ।**
**ತದಭಾವೇ ಪಿತುರ್ಭ್ರಾತಾ ತದಭಾವೇ ತು ಸೋದರಃ ।**
**ಏತೇಷಾಮಪ್ಯಭಾವೇ ತು ಆಚಾರ್ಯೋಪನಯೇತ್ ಸುತಮ್ ॥** —ಗೃ.ಕ.ಸ.

ಮಗನಿಗೆ ತಂದೆಯೇ ಉಪನಯನ ಮಾಡಬೇಕು. ಅವನಿಲ್ಲದಿದ್ದರೆ ತಂದೆಯ ತಂದೆ (ಅಜ್ಜ), ಅವನೂ ಇಲ್ಲದಿದ್ದರೆ ತಂದೆಯ ಅಣ್ಣತಮ್ಮಂದಿರು, ಅವರೂ ಇಲ್ಲದಿದ್ದರೆ ಅಣ್ಣ ಮಾಡಬಹುದು. ಮೇಲೆ ಹೇಳಿದವರು ಯಾರೂ ಇಲ್ಲದಿದ್ದರೆ ಪುರೋಹಿತರು (ಗುರುಗಳು) ಮಾಡಬಹುದು.

**ಅಸಗೋತ್ರಃ ಸಗೋತ್ರೋ ವಾ ಯ ಆಚಾರ್ಯ ಉಪನಯೇತ್ ।**
**ತದೋಪನೇಯ ಪಿತ್ರಾದೀನುದ್ದಿಶ್ಯಾಭ್ಯುದಯಂ ಚರೇತ್ ॥** —ಗೃ.ಕ.ಸ.

ಹುಡುಗನ ಗೋತ್ರದವರಾಗಲೀ, ಇತರ ಗೋತ್ರದ ಬಂಧುಗಳಾಗಲೀ ಉಪನಯನ ಮಾಡುವಾಗ ಹುಡುಗನ ಪಿತೃಗಳನ್ನೇ ಉದ್ದೇಶಿಸಿ ನಾಂದೀಶ್ರಾದ್ಧ ಮಾಡಬೇಕು. ಇದಲ್ಲದೆ ನಾಂದಿಗೆ ಕುಳಿತವರು ತಮ್ಮ ಪಿತೃಗಳಿಗೆ ನಾಂದೀಶ್ರಾದ್ಧ ಮಾಡಬಾರದು.

**ಕನ್ಯೋದ್ವಾಹೇಷ್ವಯಂ ಮಾರ್ಗಃ ಮನಿಭಿಃ ಪರಿಕೀರ್ತಿತಃ ॥** –ಗೃ.ಕ.ಸ.

ಇನ್ನೊಬ್ಬರ ಹುಡುಗಿಗೆ ವಿವಾಹ ಮಾಡುವಾಗಲೂ ಇದೇ ನಿಯಮ.

ಯಾವ ಯಾವ ಕರ್ಮಕ್ಕೆ ಎಷ್ಟು ದಿನ ಮೊದಲು ನಾಂದೀ ಮಾಡಬಹುದು?

**ಏಕವಿಂಶತ್ಯಹರ್ಯಜ್ಞೇ ವಿವಾಹೇ ದಶವಾಸರಾಃ ।**
**ತ್ರಿ–ಷಟ್ ಚೌಲೋಪನಯನೇ ನಾಂದೀಶ್ರಾದ್ಧಂ ವಿಧೀಯತೇ** ॥ –ಗೃ.ಕ.ಸ.

ದೊಡ್ಡ ಯಜ್ಞ(ಸಂಹಿತಾಯಾಗ ಇತ್ಯಾದಿ)ಗಳನ್ನು ಮಾಡುವಾಗ ಯಜ್ಞದ ಕೊನೆಗೆ ಮಾಡುವ ಅವಭೃಥಸ್ನಾನದ ದಿನದಿಂದ ೨೧ ದಿನ ಮುಂಚೆ ನಾಂದಿಯನ್ನು ಇಡಬಹುದು. ವಿವಾಹದಲ್ಲಿ ಋಗ್ವೇದಿಗಳಿಗೆ ನಾಲ್ಕನೇ ದಿನವೂ, ಯಜುರ್ವೇದಿಗಳಿಗೆ ಐದನೇ ದಿನವೂ ಅವಭೃಥ. ಈ ದಿನಕ್ಕೆ ಸೇರಿ ೧೦ ದಿನ ಮುಂಚೆಯೂ, ಹಾಗೆಯೇ ಉಪನಯನದಲ್ಲಿ ಋಗ್ವೇದಿಗಳಿಗೆ ನಾಲ್ಕನೇ ದಿನವೂ, ಯಜುರ್ವೇದಿಗಳಿಗೆ ಐದನೇ ದಿನವೂ ಅವಭೃಥ. ಇದಕ್ಕೆ ಆರು ದಿನ ಮುಂಚೆ ಇಡಬಹುದು. ಎರಡೂ ಶಾಖೆಯವರಿಗೂ ಚೌಲಕ್ಕೆ ಮೂರು ದಿನ ಮುಂಚೆ ನಾಂದಿ ಇಡಬಹುದು. ಬಾಕಿ ಎಲ್ಲಾ ಕರ್ಮಗಳಿಗೂ ಒಂದು ದಿನ ಮುಂಚೆ ಅಥವಾ ಅದೇ ದಿನ ಬೆಳಿಗ್ಗೆ ನಾಂದಿ ಇಡಬಹುದು.

ನಾಂದಿ ಇಟ್ಟ ಮೇಲೆ ಅಶೌಚ ಬಂದರೆ ಎಷ್ಟರವರೆಗೆ ಕರ್ಮ ಮಾಡಬಹುದು? ಕರ್ಮಗಳ ಪ್ರಾರಂಭ ಯಾವಾಗ?

**ಪ್ರಾರಂಭೋ ವರಣಂ ಯಜ್ಞೇ ಸಂಕಲ್ಪೋ ವ್ರತಸತ್ರಯೋಃ ।**
**ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಕ್ರಿಯಾ ॥** –ಗೃ.ಕ.ಸ.

ಯಜ್ಞಗಳಲ್ಲಿ ಋತ್ವಿಗ್ವರಣ, ಅನಂತನವ್ರತವೇ ಮೊದಲಾದ ವ್ರತಗಳಲ್ಲಿಯೂ, ಸತ್ರ(ಹೋಮ)ಗಳಲ್ಲಿಯೂ ಸಂಕಲ್ಪ, ವಿವಾಹಾದಿ ಶುಭಕರ್ಮಗಳಲ್ಲಿ ನಾಂದೀಶ್ರಾದ್ಧ, ಶ್ರಾದ್ಧದಲ್ಲಿ ಹವಿಸ್ಸುಮಾಡಿ, ಪ್ರಾರಂಭಮಾಡಿ 'ಅಪವಿತ್ರಃ ಪವಿತ್ರೋ......' ಎಂದು ಹೇಳಿ ಎಲ್ಲಾ ಪದಾರ್ಥಗಳಿಗೆ ಪ್ರೋಕ್ಷಣೆ ಮಾಡಿ, 'ಸರ್ವೇಪಾಕಾಃ, ಸ್ಥಳಾನಿ, ವಿಪ್ರಾಶ್ಚಶುಚಯೋ ಭವಂತು' ಎಂದು ಹೇಳಿದ ಮೇಲೆ ಅಶೌಚ ಬಂದರೆ ಕರ್ಮ ಪೂರ್ತಿ ಮಾಡಬಹುದು.

ಈ ದೀಕ್ಷೆಯ ಅಂತ್ಯ ಎಲ್ಲಿ?

**ದೀಕ್ಷಾಂತೋಽವಭೃಥಂ ಯಜ್ಞೇ ಕಂಕಣಾಂತೇ ವಧೂವರೌ ।**
**ವ್ರತೇ ಬ್ರಹ್ಮೋದನಂ ಯಾವತ್ ವಟೋಃ ಪಾಲಾಶದರ್ಶನಂ ।**
**ತಾವನ್ನಾಶೌಚಮಿತ್ಯಾಹುಃ ಶ್ರಾದ್ಧೇ ವಿಪ್ರಾಂಘ್ರಿಶೋಧನಾತ್ ॥** –ಗೃ.ಕ.ಸ.

ಎಲ್ಲಾ ಯಜ್ಞಗಳಲ್ಲಿಯೂ ಅವಭೃಥಸ್ನಾನದವರೆಗೆ, ಉತ್ಸವಾದಿಗಳಲ್ಲಿಯೂ ಹೀಗೆಯೇ. ವಿವಾಹದಲ್ಲಿ ಯಜಮಾನನು ಕನ್ಯಾದಾನ ಮಾಡಿ, ಕಲಶಕ್ಕೂ–ನಾಂದೀದೇವತೆಗಳಿಗೂ ಉತ್ತರಪೂಜೆ ಮಾಡಿ, ಕೃಷ್ಣಾರ್ಪಣ ಬಿಟ್ಟು ಇದನ್ನು ಉದ್ವಾಸನೆ ಮಾಡುವವರೆಗೆ, ವಧೂವರರಿಗೆ ಅವಭೃಥದನಂತರ ಕಂಕಣಬಂಧ ವಿಸರ್ಜನೆ ಮಾಡುವವರೆಗೆ, ಉಪನಯನದಲ್ಲಿ ಬ್ರಹ್ಮೋದನ ಮುಗಿಯುವವರೆಗೆ ಯಜಮಾನನಿಗೂ, ವಟುವಿಗೆ ಅವಭೃಥಸ್ನಾನದ ಅನಂತರ ಪಾಲಾಶದರ್ಶನದವರೆಗೆ, ಶ್ರಾದ್ಧದಲ್ಲಿ ಎಲ್ಲಾ ಮುಗಿದ ಮೇಲೆ ಬ್ರಾಹ್ಮಣರ ಪಾದಪ್ರಕ್ಷಾಲನೆ ಮಾಡಿ, ಅವರನ್ನು ಕಳುಹಿಸಿಕೊಡುವವರೆಗೆ ಅಶೌಚ ಇಲ್ಲ.

ನಾಂದೀಶ್ರಾದ್ಧದನಂತರ ನಾಂದೀವಿಸರ್ಜನೆ ಮಾಡುವವರೆಗೆ ನಾಂದಿಯ ದೀಕ್ಷೆ ಇದ್ದವರು ಹೇಗಿರಬೇಕು?

**ನಾಂದೀಶ್ರಾದ್ಧೇ ಕೃತೇ ಪಶ್ಚಾದ್ಯಾವನ್ಮಾತೃವಿಸರ್ಜನಮ್ ।**
**ದರ್ಶಶ್ರಾದ್ಧಂ ಕ್ಷಯಶ್ರಾದ್ಧಂ ಸ್ನಾನಂ ಶೀತೋದಕೇನ ಚ ॥**

**ಅಪಸವ್ಯಂ ಸ್ವಧಾಕಾರಂ ನಿತ್ಯಶ್ರಾದ್ಧಂ ತಥೈವ ಚ ।**
**ಬ್ರಹ್ಮಯಜ್ಞಂ ಚಾಧ್ಯಯನಂ ನಾಂದೀಸೀಮಾವಿಲಂಘನಮ್ ॥**

**ಉಪವಾಸವ್ರತಂ ಚೈವ ಶ್ರಾದ್ಧಭೋಜನಮೇವ ಚ ।**
**ನೈವ ಕುರ್ಯುಃ ಸಪಿಂಡಾಶ್ಚ ಮಂಟಪೋದ್ವಾಸನಾವಧಿ ॥** –ಗೃ.ಕ.ಸ.

ಯಾರು ಯಾವ ಕರ್ಮಾಂಗವೇ ಆಗಲಿ, ನಾಂದೀಶ್ರಾದ್ಧ, ಮಾತೃಕಾಪೂಜೆ ಮಾಡುತ್ತಾನೋ ಅವನೂ, ಅವನ ಪತ್ನಿಯೂ, ಸಂಸ್ಕಾರ್ಯನೂ ಕೂಡ (ವಟು ಅಥವಾ ವಧೂರವರರು) ದರ್ಶಶ್ರಾದ್ಧ, ಪಾರ್ವಣಶ್ರಾದ್ಧ, ತಣ್ಣೀರಲ್ಲಿ ಸ್ನಾನ, ಉಪವೀತವನ್ನು ಎಡಕ್ಕೆ ಹಾಕುವುದು, ಸ್ವಧಾಕಾರ ಹೇಳುವುದು, ನಿತ್ಯಶ್ರಾದ್ಧ (ಅಥವಾ ಪಿತೃತರ್ಪಣ), ಬ್ರಹ್ಮಯಜ್ಞ, ವೇದಾಧ್ಯಯನ, ನಾಂದಿ ಇಟ್ಟ ಊರನ್ನು ದಾಟುವುದು, ಏಕಾದಶೀವ್ರತ ಅಲ್ಲದೇ ಬೇರೆ ಕಾಮ್ಯ ಉಪವಾಸ, ಶ್ರಾದ್ಧಭೋಜನ –ಇವುಗಳನ್ನು ಮಾಡಬಾರದು. ಮೇಲೆ ಹೇಳಿದವರೂ ಅಲ್ಲದೆ ಇವರ ಸಪಿಂಡರೂ (ಪಿತೃ, ಪಿತಾಮಹ, ಪ್ರಪಿತಾಮಹ) ವರ್ಗದವರೆಲ್ಲರೂ ಕೂಡ ಮಂಟಪೋದ್ವಾಸನ, ನಾಂದೀವಿಸರ್ಜನಪರ್ಯಂತ ಈ ಕಾರ್ಯಗಳನ್ನು ಮಾಡಬಾರದು. ನಾಂದಿ ಇಟ್ಟ ಮೇಲೆ ನಾಂದೀವಿಸರ್ಜನೆಯ ಮಧ್ಯದಲ್ಲಿ ಅಮಾವಾಸ್ಯೆ, ಸಂಕ್ರಾಂತಿ ಬರಬಾರದು. ಇದು ಎರಡೂ ಶ್ರಾದ್ಧದ ದಿನ. ಸೌರಮಾಸದಲ್ಲಿ ನಾಂದಿ ಇಟ್ಟರೆ ಆ ಸೌರಮಾಸ ಮುಗಿಯುವವರೆಗೆ ಸಾಂವತ್ಸರಿಕಶ್ರಾದ್ಧ ಬರಬಾರದು; ಮಾಡಲೂ ಬಾರದು. ನಾಂದೀಶ್ರಾದ್ಧ, ವೃದ್ಧಿಶ್ರಾದ್ಧ, ಪಿತೃಶ್ರಾದ್ಧ, ಕ್ಷಯಶ್ರಾದ್ಧ. ವೃದ್ಧಿಶಾದ್ಧದನಂತರ ಆ ಮಾಸದಲ್ಲಿ ಕ್ಷಯಶ್ರಾದ್ಧ ಮಾಡಬಾರದು. ನಾಂದಿ ಇಟ್ಟ ಮೇಲೆ ನಾಂದಿಯಲ್ಲಿ ಪೂಜೆ ಮಾಡಿದ ಎರಡು ಕೂರ್ಚಗಳು ಹಾಗೂ ಎರಡು ಅಡಿಕೆಗಳನ್ನು ಒಂದು ಹರಿವಾಣದಲ್ಲಿಟ್ಟು ಅದನ್ನು ದೇವರ ಕೋಣೆಯಲ್ಲಿ ದೇವರ ಬಲಭಾಗದಲ್ಲಿಡಬೇಕು. ಪ್ರತಿನಿತ್ಯ (ನಾಂದಿವಿಸರ್ಜನೆ ಆಗುವವರೆಗೆ) ದೇವರಪೂಜೆಯ ಅನಂತರ ಆ ಆರತಿಯನ್ನು ಇದಕ್ಕೂ ತೋರಿಸಬೇಕು. 'ನಾಂದೀಮುಖವಿಶ್ವೇಭ್ಯೋ ದೇವೇಭ್ಯೋ ನಮಃ, ನಾಂದೀಮುಖಪಿತೃಭ್ಯೋ ನಮಃ' ಎಂದು ಪೂಜಿಸುತ್ತಿರಬೇಕು.

**ವೃದ್ಧೌ ನ ತರ್ಪಿತಾ ಯೇನ ಪಿತ್ರರ್ಥೇ ಗೃಹಮೇಧಿನಾ ।**
**ತದ್ದಾನಮಫಲಂ ಸರ್ವಮಾಸುರೋ ವಿಧಿರೇವ ಸಃ ॥** –ಪ್ರ.ಪಾ.

ಯಾವ ಗೃಹಸ್ಥಾಶ್ರಮಿಯು ಶುಭಕರ್ಮದಲ್ಲಿ ಪಿತೃತೃಪ್ತಿಕರವಾದ ನಾಂದೀಶ್ರಾದ್ಧವನ್ನು ಮಾಡುವುದಿಲ್ಲವೋ ಆ ಕರ್ಮದ ಫಲ ಬರುವುದಿಲ್ಲ. ಎಲ್ಲವೂ ಆಸುರವಾಗುತ್ತದೆ.

**ನಾಂದೀಶ್ರಾದ್ಧಂ ಪಿತಾ ಕುರ್ಯಾತ್ ಆದ್ಯಪಾಣಿ ಗ್ರಹಾವಧಿ ।**
**ಅತ ಊರ್ಧ್ವಂ ಪ್ರಕುರ್ವೀತ ಸ್ವಯಮೇವ ತು ನಾಂದಿಕಮ್ ॥**

ಗರ್ಭಾಧಾನದಿಂದ ಆರಂಭಿಸಿ ವಿವಾಹಪರ್ಯಂತ ಕರ್ಮಗಳಿಗೆ ತಂದೆಯೇ ನಾಂದಿಶ್ರಾದ್ಧವನ್ನು ಮಾಡಬೇಕು. ವಿವಾಹಾನಂತರದ ಎಲ್ಲಾ ಕರ್ಮಗಳಿಗೆ ತಾನೇ ನಾಂದಿಶ್ರಾದ್ಧವನ್ನು ಮಾಡಬೇಕು. ಮುಂದೆ ಹುಟ್ಟತಕ್ಕ ಮಗುವಿನ ಷೋಡಶಕರ್ಮಗಳ ಮೊದಲನೆಯದಾದ ಗರ್ಭಾಧಾನಕ್ಕೆ ತಾನೇ ನಾಂದಿಶ್ರಾದ್ಧಮಾಡಿ ಗರ್ಭಾಧಾನಸಂಸ್ಕಾರವನ್ನು ಮಾಡಬೇಕು. ಹೀಗೆಯೇ ಪುಂಸವನ, ಸೀಮಂತ, ವಿಷ್ಣುಬಲಿ, ಮಗು ಹುಟ್ಟಿದನಂತರದ ಜಾತಕರ್ಮಾದಿ ವಿವಾಹಾಂತ ಕರ್ಮಗಳನ್ನು ನಾಂದೀಶ್ರಾದ್ಧಪೂರ್ವಕವಾಗಿ ಮಾಡಿದಲ್ಲಿ ಆ ಮಗುವಿಗೆ ಷೋಡಶಕರ್ಮಗಳು ಪೂರ್ಣಗೊಂಡಂತಾಗುವುದು.

## ನಾಂದೀಶ್ರಾದ್ಧಾಂಗಮಾತೃಕಾಪೂಜನಮ್[೨೧೮]

(ಇದಂ ಚ ನಾಂದೀಶ್ರಾದ್ಧಂ ಪುಣ್ಯಾಹಕಾಲೇ ಪುಣ್ಯಾಹಪ್ರೋಕ್ಷಣಾನಂತರಂ ಕಾರ್ಯಮ್ ॥)

(ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ) ಕರಿಷ್ಯಮಾಣ..... ಕರ್ಮಣಃ ....ಸಿದ್ಧ್ಯರ್ಥಂ ನಾಂದೀಶ್ರಾದ್ಧಾಂಗತ್ವೇನ ಮಾತೃಕಾಪೂಜನಂ ಕರಿಷ್ಯೇ ॥ (ಇತಿ ಸಂಕಲ್ಪ್ಯ)

**ಗೌರೀ ಪದ್ಮಾ ಶಚೀ ಮೇಧಾ ಸಾವಿತ್ರೀ ವಿಜಯಾ ಜಯಾ ।**
**ದೇವಸೇನಾ ಸ್ವಧಾ ಸ್ವಾಹಾ ಮಾತರೋ ಲೋಕಮಾತರಃ ॥**
**ಧೃತಿಃ ಪುಷ್ಟಿಸ್ತಥಾ ತುಷ್ಟಿರಾತ್ಮನಃ ಕುಲದೇವತಾ** ॥ ೧ ॥

**ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ।**
**ವಾರಾಹೀ ಚ ತಥೇಂದ್ರಾಣೀ ಚಾಮುಂಡಾ ಸಪ್ತ ಮಾತರಃ** ॥ ೨ ॥

ಗೌರ್ಯಾದಿಷೋಡಶಮಾತೃಃ, ಬ್ರಾಹ್ಮ್ಯಾದಿಸಪ್ತಮಾತೃಃ, ದುರ್ಗಾಂ ಕ್ಷೇತ್ರಪಾಲಂ ಗಣಪತಿಂ ಚ ಏತೇಷ್ವಕ್ಷತಪುಂಜೇಷ್ವಾವಾಹಯಾಮಿ ॥

ತದಸ್ತು ಮಿತ್ರಾವರುಣಾತ್ರೇಯಃ ಪ್ರತಿರಥಋಷಿಃ । ತ್ರಿಷ್ಟುಪ್‌ಛಂದಃ । ವಿಶ್ವೇದೇವಾದೇವತಾಃ । ದೇವತಾಪ್ರತಿಷ್ಠಾಪನೇ ವಿನಿಯೋಗಃ ॥

**ಓಂ ತದಸ್ತು ಮಿತ್ರಾವರುಣಾ ತದಗ್ನೇ ಶಂ ಯೋರಸ್ಮಭ್ಯಮಿದಮಸ್ತು ಶಸ್ತಮ್ । ಅಶೀಮಹಿ ಗಾಧಮುತ ಪ್ರತಿಷ್ಠಾಂ ನಮೋ ದಿವೇ ಬೃಹತೇ ಸಾದನಾಯ ॥ ಓಮ್ ॥**

**ಗೃಹಾ ವೈ ಪ್ರತಿಷ್ಠಾ ಸೂಕ್ತಂ ತತ್‌ಪ್ರತಿಷ್ಠಿತತಮಯಾ ವಾಚಾ ಶಂಸ್ತವ್ಯಂ ತಸ್ಮಾದ್ಯದ್ಯಪಿ ದೂರ ಇವ ಪಶೂಂಲ್ಲಭತೇ ಗೃಹಾನೇವೈ ನಾನಾಜಿಗಮಿಷತಿ ಗೃಹಾ ಹಿ ಪಶೂನಾಂ ಪ್ರತಿಷ್ಠಾ ಪ್ರತಿಷ್ಠಾ ॥ ಸುಪ್ರತಿಷ್ಠಿತಮಸ್ತು । ಓಂ ಭೂರ್ಭುವಃಸ್ವಃ ಗೌರ್ಯಾದ್ಯಾವಾಹಿತದೇವತಾಭ್ಯೋ ನಮಃ । ಧ್ಯಾಯಾಮಿ ॥** ....... (ಇತ್ಯಾದಿ ಷೋಡಶೋಪಚಾರೈಃ ಪೂಜಯೇತ್ ॥)

ಗೌರೀರ್ಮಿಮಾಯ ದೀರ್ಘತಮಾಔಚಥ್ಯಋಷಿಃ । ಜಗತೀಛಂದಃ । ಉಮಾದೇವತಾ । ಮಂತ್ರಪುಷ್ಪಾರ್ಚನೇ ವಿನಿಯೋಗಃ ॥

**ಓಂ ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿಪದೀ ಸಾ ಚತುಷ್ಪದೀ । ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ ವ್ಯೋಮನ್ ॥**

ಓಂ ಭೂರ್ಭುವಃಸ್ವಃ । ಗೌರ್ಯಾದ್ಯಾವಾಹಿತದೇವತಾಭ್ಯೋ ನಮಃ । ಮಂತ್ರಪುಷ್ಪಂ ಸಮರ್ಪಯಾಮಿ ॥

ಅನೇನ ಷೋಡಶೋಪಚಾರೈಃ ಪೂಜನೇನ ಗೌರ್ಯಾದ್ಯಾವಾಹಿತದೇವತಾಃ ಪ್ರೀಯಂತಾಮ್ ॥

॥ ಇತಿ ಮಾತೃಕಾಪೂಜನಂ ಸಂಪೂರ್ಣಮ್ ॥

---

೨೧೮. ಮಾತೃಕಾರಾಧನೆ ಮಾಡದೆ ನಾಂದೀಶ್ರಾದ್ಧ ಮಾಡಿದರೆ ಮುಂದಿನ ಕರ್ಮವು ಪೂರ್ಣವಾಗುವಂತಿಲ್ಲ. ಆ ಉದ್ದೇಶದಿಂದ ಮಾತೃಕಾಪೂಜೆಯಲ್ಲಿ ಗೌರ್ಯಾದಿ ೧೬ ದೇವತೆಗಳು, ಬ್ರಾಹ್ಮ್ಯಾದಿ ಸಪ್ತಮಾತೃಕಾದೇವತೆಗಳು ತನ್ನ ಕುಲದೇವತಾಸಹಿತವಾಗಿ ದುರ್ಗಾ, ಗಣಪತಿ, ವಾಸ್ತೋಷ್ಪತಿ, ಕ್ಷೇತ್ರಪತಿ ಇವಿಷ್ಟು ಮಂಗಲದೇವತೆಗಳನ್ನು ಅಕ್ಷತಪುಂಜದಲ್ಲಿ ಆವಾಹಿಸಿ, ಪ್ರತಿಷ್ಠಾಸೂಕ್ತ ಜಪಿಸಿ ಪೂಜಿಸಬೇಕು. ಕರ್ಮಾಂತ್ಯದವರೆಗೆ ಇವರನ್ನು ಉದ್ವಾಸನೆ ಮಾಡಬಾರದು. ಅನಂತರ ನಾಂದೀಸಮಾರಾಧನೆ ಪ್ರಾರಂಭಿಸಬೇಕು.

## ನಾಂದೀಸಮಾರಾಧನಮ್[೨೧೩]

ಪೂರ್ವೋಕ್ತೈವಂಗುಣವಿಶೇಷಣವಿಶಿಷ್ಟಾಯಾಂ ಶುಭಪುಣ್ಯತಿಥೌ ಧರ್ಮಾರ್ಥಕಾಮಪ್ರಜಾಸಂಪತ್ತ್ಯರ್ಥಂ ಅದ್ಯ(ಶ್ವಃ) ಕರಿಷ್ಯಮಾಣ .........ಕರ್ಮಾಂಗತಯಾ ನಾಂದೀಶೋಧನದೇವತಾಪ್ರೀತ್ಯರ್ಥಂ ನಾಂದೀಸಮಾ-ರಾಧನಾಖ್ಯಂ ಕರ್ಮ ಕರಿಷ್ಯೇ ॥

ಕರಿಷ್ಯಮಾಣಕರ್ಮಣ್ಯಾಭ್ಯುದಯಿಕಶ್ರಾದ್ಧೇ ಸತ್ಯವಸುಸಂಜ್ಞಕಾನಾಂ ವಿಶ್ವೇಷಾಂ ದೇವಾನಾಮಿದಮಾಸನಮ್। ನಾಂದೀಮುಖಪಿತೃಣಾಮಿದಮಾಸನಮ್ ॥

ಕರಿಷ್ಯಮಾಣಕರ್ಮಣ್ಯಾಭ್ಯುದಯಿಕಶ್ರಾದ್ಧೇ ಸತ್ಯವಸುಸಂಜ್ಞಕಾನ್ವಿಶ್ವಾನ್ ದೇವಾನಾವಾಹಯಿಷ್ಯೇ । ನಾಂದೀಮುಖಪಿತೃನಾವಾಹಯಿಷ್ಯೇ ॥

ಸದೂರ್ವಾಕ್ಷತಾನ್ ಜಲಂ ಚ ಹಸ್ತೇನಾದಾಯ, ಕರಿಷ್ಯಮಾಣ .........ಕರ್ಮಣ್ಯಾಭ್ಯುದಯಿಕಶ್ರಾದ್ಧೇ ಸತ್ಯವಸು-ಸಂಜ್ಞಕಾ ವಿಶ್ವೇದೇವಾಃ ನಾಂದೀಮುಖಾಃ ಭೂರ್ಭುವಸ್ಸ್ವಃ ಇದಂ ವಃ ಪಾದ್ಯಂ ಸ್ವಾಹಾ ನಮಃ । ಇಯಂ ಚ ವೃದ್ಧಿಃ ॥ ಮಾತೃಪಿತಾಮಹೀಪ್ರಪಿತಾಮಹ್ಯಃ ನಾಂದೀಮುಖಾಃ ....... ಕರ್ಮಣ್ಯಾಭ್ಯುದಯಿಕ- ಶ್ರಾದ್ಧೇ ಭೂರ್ಭುವಸ್ಸ್ವಃ ಇದಂ ವಃ ಪಾದ್ಯಂ ಸ್ವಾಹಾ ನಮಃ । ಇಯಂ ಚ ವೃದ್ಧಿಃ ॥ ಪಿತೃಪಿತಾಮಹಪ್ರಪಿತಾಮಹಾಃ ನಾಂದೀಮುಖಾಃ .....ವೃದ್ಧಿಃ ॥ ಸಪತ್ನೀಕ-ಮಾತಾಮಹಮಾತೃಪಿತಾಮಹಮಾತೃಪ್ರಪಿತಾಮಹಾಃ ನಾಂದೀಮುಖಾಃ .....ವೃದ್ಧಿಃ ॥

ಸದೂರ್ವಾಂಕುರಾ ಗಂಧಪುಷ್ಪಾಕ್ಷತಾನ್ ಜಲಂ ಚ ಹಸ್ತೇನಾದಾಯ, ಸತ್ಯವಸುಸಂಜ್ಞಕಾ ವಿಶ್ವೇದೇವಾ ನಾಂದಿಮುಖಾಃ ಭೂರ್ಭುವಸ್ಸ್ವಃ ಇದಂ ವಃ ಗಂಧಾದ್ಯುಪಚಾರಕಲ್ಪನಂ ಸ್ವಾಹಾ ನಮಃ । ಇಯಂ ಚ ವೃದ್ಧಿಃ ॥ ಮಾತೃ-ಪಿತಾಮಹೀ-ಪ್ರಪಿತಾಮಹ್ಯಃ ನಾಂದೀಮುಖಾಃ ಭೂರ್ಭುವಸ್ಸ್ವಃ ಇದಂ ವಃ ಗಂಧಾ .......ವೃದ್ಧಿಃ ॥ ಪಿತೃಪಿತಾಮಹಪ್ರಪಿತಾಮಹಾಃ ನಾಂದೀಮುಖಾ ಇದಂ ವಃ ಗಂಧಾ ........ವೃದ್ಧಿಃ ॥ ಸಪತ್ನೀಕಮಾತಾ-ಮಹಮಾತೃಪಿತಾಮಹಮಾತೃಪ್ರಪಿತಾಮಹಾಃ ನಾಂದೀಮುಖಾಃ ಭೂರ್ಭುವಸ್ಸ್ವಃ ಇದಂ ವಃ ಗಂಧಾ .....ವೃದ್ಧಿಃ ।

ತತಃ ಪುರತಸ್ಥಿತ ಆಮದ್ರವ್ಯ ದ್ವಯಂ ಪ್ರೋಕ್ಷ್ಯ ಪರಿಷಿಂಚೇತ್ ।

**ಓಂ ಭೂರ್ಭುವಸ್ಸ್ವಃ । ಸತ್ಯಂತ್ವರ್ತೇನ ಪರಿಷಿಂಚಾಮಿ ॥ ದೇವಸ್ಯ ತ್ವಾ ಸವಿತುಃ**

---

೨೧೩. ನಾಂದೀಸಮಾರಾಧನೆಯನ್ನು ನಾಂದೀಶ್ರಾದ್ಧವೆಂದು, ವೃದ್ಧಿಶ್ರಾದ್ಧವೆಂದು ಶಾಸ್ತ್ರವು ಹೆಸರಿಸಿದೆ. ಹಿರಿಯರ ಮೃತಾಹದಿನ ಆಚರಿಸುವುದು ವಾರ್ಷಿಕಶ್ರಾದ್ಧ. ಮಂಗಲಕಾರ್ಯಗಳ ಅಭ್ಯುದಯ(ವೃದ್ಧಿ)ಕ್ಕಾಗಿ ಆಚರಿಸುವುದು ವೃದ್ಧಿಶ್ರಾದ್ಧ. ನಾಂದೀಶ್ರಾದ್ಧದಲ್ಲಿ ಮಾತೃದೇವತಾವರ್ಗ, ಪಿತೃದೇವತಾವರ್ಗ, ಸಪತ್ನೀಕಮಾತಾಮಹವರ್ಗವೆಂದು ಒಟ್ಟು ಒಂಭತ್ತು ದೇವತೆಗಳು ಹಾಗೂ ಇಬ್ಬರು ವಿಶ್ವೇದೇವತೆಗಳು; ಇವರ ಸ್ಥಾನಕ್ಕೆ ಇಬ್ಬರು ಬ್ರಾಹ್ಮಣರಂತೆ ೨೨ ಮಂದಿ ಬ್ರಾಹ್ಮಣರು ಅಥವಾ ಒಂದು ವರ್ಗಕ್ಕೆ ಇಬ್ಬರಂತೆ ೮ ಮಂದಿ ಬ್ರಾಹ್ಮಣರು ಅಥವಾ ಒಬ್ಬರಂತೆ ೪ ಮಂದಿ ಬ್ರಾಹ್ಮಣರನ್ನು ಆರಾಧಿಸಬೇಕು. ಪಾರ್ವಣಶ್ರಾದ್ಧವಿಧಾನದಂತೆ ಬ್ರಾಹ್ಮಣಭೋಜನ, ಪಿಂಡಪ್ರದಾನವಿಧಿಯು ಹಿಂದೆ ಇತ್ತು. ಈವಾಗ ಶೈವಸಂಪ್ರದಾಯದಲ್ಲಿ ಈ ವಿಧಿಯು ಇಲ್ಲ. ಸಂಬಂಧನಾಮಗೋತ್ರರೂಪಚಿಂತನೆಗಳಿಲ್ಲ; ಹಾಗೂ ಅಪಸವ್ಯ, ತಿಲ, ದಕ್ಷಿಣಾಮುಖ ಉಪವೇಶನಗಳೂ ಇಲ್ಲ. ಈವಾಗ ನಾಂದೀಶ್ರಾದ್ಧವನ್ನು ಆಮದ್ರವ್ಯದಾನರೂಪವಾಗಿ ಆಚರಿಸಲಾಗುವುದು.

ಚತುರಸ್ರಮಂಡಲ ಮಾಡಿ ಎರಡು ಪೀಠಗಳನ್ನು ಕಲ್ಪಿಸಿ, ಅದರ ಮೇಲೆ ಎರಡು ಹಣ್ಣಡಿಕೆ ಇಟ್ಟು, ನಾಲ್ಕು ಎಸಳಿನ ಕೂರ್ಚಗಳನ್ನು ಪೂರ್ವಾಗ್ರವಾಗಿ ಇಡಬೇಕು. ಆ ಕೂರ್ಚದಲ್ಲಿ ಉತ್ತರದಲ್ಲಿ ವಿಶ್ವೇದೇವತೆಗಳನ್ನೂ, ದಕ್ಷಿಣದಲ್ಲಿ ನಾಂದೀಶ್ರಾದ್ಧ ದೇವತೆಗಳನ್ನೂ ಆವಾಹಿಸಿ ಪೂಜಿಸಬೇಕು. ಅವರ ಮುಂದೆ ಅಕ್ಕಿ, ತೆಂಗಿನಕಾಯಿ, ತರಕಾರಿ, ಬೇಳೆಕಾಳು ಇವಿಷ್ಟು ಆಮದ್ರವ್ಯಗಳನ್ನು ಎರಡು ಪ್ರತಿಯಾಗಿಟ್ಟು, ಸಮರ್ಪಿಸಿ, ಬಳಿಕ ಅದನ್ನು ಬ್ರಾಹ್ಮಣರಿಗೆ ತಾಂಬೂಲದಕ್ಷಿಣೆಸಹಿತವಾಗಿ ದಾನಮಾಡಿ ಕೂರ್ಚದಲ್ಲಿ ಆವಾಹಿಸಿದ ನಾಂದೀದೇವತೆಗಳನ್ನು ಉದ್ವಾಸನೆ ಮಾಡಬೇಕು.

ವಧೀ ರುದ್ರ ಮಾ ಪರಾ ದಾ ಮಾ ತೇ ಭೂಮ ಪ್ರಸಿತೌ ಹೀಳಿತಸ್ಯ । ಆ ನೋ ಭಜ ಬರ್ಹಿಷಿ ಜೀವ-ಶಂಸೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೪ ॥ (೭-೪೬-೧.....೪)

ತತಃ ಅಗ್ನಿಪ್ರತಿಷ್ಠಾಪನಂ ಕೃತ್ವಾ, ಅಗ್ನಿಧ್ಯಾನಾಂತೇ, ಅನ್ವದಧ್ಯಾತ್ । ಚಕ್ಷುಷ್ಯಂತಂ ಉಕ್ತ್ವಾ ನವಗ್ರಹಾದಿ ಕೀರ್ತನಾಂತೇ, ಬ್ರಹ್ಮಾಣಂ -ವಿಷ್ಣುಂ-ಮಹೇಶಂ-ಇಂದ್ರಂ-ರುದ್ರಂ ಚ ಪ್ರತ್ಯೇಕಂ ಸಮಿತ್-ಆಜ್ಯ-ಚರು-ತಿಲೈಃ ಅಷ್ಟೋತ್ತರಶತಾಹುತಿಭಿಃ ಶೇಷೇಣೇತ್ಯಾದಿ[೧೧]

ಆಜ್ಯಭಾಗಾಂತಂ ಕೃತ್ವಾ ನವಗ್ರಹ ಹೋಮಾಂತೇ ಪೂರ್ವೋಕ್ತ ಪಂಚಮಂತ್ರೈಃ ಪ್ರಧಾನಂ ಹುತ್ವಾ ಸ್ವಿಷ್ಟಕೃದಾದಿ ಪ್ರಾಯಶ್ಚಿತ್ತಾಂತಂ ಜುಹುಯಾತ್ । ತತಃ ಬಲಿದಾನಂ । ಪೂರ್ಣಾಹುತ್ಯಾದಿ ಸಮಾಪ್ಯ, ಕಲಶ ಷಟ್ಕೋದಕೇನ ಸಕುಟುಂಬಂ ಯಜಮಾನಂ ಸಮುದ್ರ ಜ್ಯೇಷ್ಠಾದಿಭಿಃ ಅಭಿಷಿಂಚೇತ್ । ಅಭಿಷೇಕಾಂತೇ ಯಜಮಾನಃ ಆಚಾರ್ಯಾಯ ಸಹಿರಣ್ಯಂ ಧೇನುಂ ದದ್ಯಾತ್ । ಆಜ್ಯಾವಲೋಕನಂ ತದ್ದಾನಂ ಚ ಕುರ್ಯಾತ್। ಉತ್ತರಪೂಜಾದಿ ವಿಧಾಯ, ದೇವತಾವಿಸರ್ಜನಾಂತೇ ಪ್ರತಿಮಾಃ ಕಲಶಾಂಶ್ಚ ಆಚಾರ್ಯಾಯ-ಋತ್ವಿಗ್ಭ್ಯಶ್ಚ ಯಥಾಶಕ್ತಿ ಫಲತಾಂಬೂಲಾದಿ ದತ್ವಾ, ಭೂಯಾಸೀಂ ದಕ್ಷಿಣಾಂ ಚ ದದ್ಯಾತ್ । ಯಥಾ ವಿಭವಂ ಬ್ರಾಹ್ಮಣಾನ್ ಭೋಜಯಿತ್ವಾ, ತೇಭ್ಯೋ ಆಶಿಷೋ ಗೃಹೀತ್ವಾ, ಕೃಷ್ಣಾರ್ಪಣಂ ಕುರ್ಯಾತ್ ।

॥ ಇತಿ ತ್ರಿಕ ಪ್ರಸವಶಾಂತಿಃ ॥



## ಅಥ ಸದಂತ ಊರ್ಧ್ವದಂತ ಜನನಶಾಂತಿಃ

ಶಿಶುವಿನ ಜನ್ಮಕಾಲದಲ್ಲಿ ಶಿಶುವು ದಂತಸಹಿತವಾಗಿ ಜನಿಸಿದ್ದರೆ ಅಥವಾ ಎಂಟು ತಿಂಗಳು ಪೂರ್ಣವಾಗುವ ಮೊದಲು ಹಲ್ಲು ಉತ್ಪತ್ತಿಯಾದರೆ ಅದು ದೋಷಕರವಾಗಿದೆ. ಅಲ್ಲದೆ ಮೊದಲು ಮೇಲ್ಭಾಗದಲ್ಲಿ ಹಲ್ಲು ಉತ್ಪತ್ತಿಯಾದರೆ ಅದೂ ದೋಷಕರವಾಗಿದೆ. ಇದು ತಂದೆತಾಯಿಯರಿಗೂ ಮಗುವಿಗೂ ನಾಶಕರವಾಗಿದೆ ಎಂದು ತಿಳಿಯಬೇಕು. ಇಂತಹ ಸಂದರ್ಭದಲ್ಲಿ ಅಗತ್ಯವಾಗಿ ಶಾಂತಿಕರ್ಮವನ್ನು ನಡೆಸಬೇಕು. ಆರನೇ ಮತ್ತು ಎಂಟನೇ ತಿಂಗಳಲ್ಲಿ ದಂತೋತ್ಪತ್ತಿಯಾದರೆ ಸ್ವಲ್ಪ ವ್ಯತ್ಯಾಸವಿದ್ದು ಪ್ರಯೋಗದಲ್ಲಿ ಕೊನೆಗೆ ಸೂಚಿಸಲಾಗಿದೆ.

**ಪ್ರಯೋಗಃ** -ಕರ್ತಾ ಕೃತನಿತ್ಯಕ್ರಿಯಃ, ಮಮಾಸ್ಯ ಶಿಶೋಃ ಪ್ರಥಮಂ ಊರ್ಧ್ವದಂತಜನನ ಸೂಚಿತ (ಸದಂತ

---

೧೧. ಮಾನವ ಸಂಹಿತಾಯಾಮ್-

ಮುಖಾಂತರಂ ಕರ್ಮ ನಿರ್ವರ್ತ್ಯ ಹವಿರಾದಾಯ ಶಾಸ್ತ್ರ ತಃ ಇದಂ ಸರ್ವೇಭ್ಯೋ ಜುಹುಯಾತ್ಸಾಧಿಪ್ರತ್ಯಧಿದೈವತಮ್ ।
ಅಷ್ಟೋತ್ತರಶತಂ ವಾಪಿ ಅಷ್ಟಾವಿಂಶತಿಮೇವ ವಾ । ಮೂಲನಕ್ಷತ್ರವಚ್ಛೇಷಂ ಹೋಮಕರ್ಮ ಸಮಾಚರೇತ್ ॥

ಗರ್ಗ ಸಂಹಿತಾಯಾಂ-

ಸಹ ವಾ ಗ್ರಹಯಜ್ಞಃ ಸ್ಯಾತ್ ಸ್ವಸ್ಯವಿತ್ತಾನುಸಾರತಃ । ಬ್ರಹ್ಮವಿಷ್ಣು ಮಹೇಶೇಂದ್ರ ಪ್ರತಿಮಾಃ ಸ್ವರ್ಣತಃ ಕೃತಾಃ ।
ಪೂಜಯೇದ್ಧಾನ್ಯರಾಶಿಸ್ಥಾ ಕಲಶೋಪರಿ ಶಕ್ತಿತಃ । ಪಂಚಮೇ ಕಲಶೇ ರುದ್ರಂ ಪೂಜಯೇದ್ರುದ್ರ ಸಂಖ್ಯಯಾ ।
(ಆಚಾರ್ಯೋ ಜುಹುಯಾತ್ತತ್ರ ಸಮಿದಾಜ್ಯ ತಿಲಾಂಶ್ಚರುಮ್ । ಅಷ್ಟೋತ್ತರಸಹಸ್ರಂ ವಾ ಶತಂ ವಾ ವಿಂಶತಿಂ ಚ ವಾ ।
ದೇವತಾಭ್ಯಶ್ಚತುರ್ವಕ್ತ್ರಾದಿಭ್ಯೋ ಗ್ರಹ ಪುರಃಸರಮ್ ॥)

ಜನನಸೂಚಿತ) (ಪ್ರಥಮಾದಿ ಮಾಸೇ ದಂತಜನ್ಮಸೂಚಿತ) ಸರ್ವಾರಿಷ್ಟ ನಿವಾರಣದ್ವಾರಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ತದುಕ್ತ ಶಾಂತಿಂ ಕರಿಷ್ಯೇ ಇತಿ ಸಂಕಲ್ಪ್ಯ, ಗುರುಗಣಪತಿಪೂಜನಾದಿ ಆಚಾರ್ಯ ವರುಣಾಂತಂ ಕುರ್ಯಾತ್ । ಆಚಾರ್ಯಃ ಭೂಶುದ್ಧ್ಯಾದಿ ವಿಧಾಯ, ದಾಲಂ ಗಜಪೃಷ್ಠೇವಾ ನೌಕಾಯಾಂ ವಾ -ಸ್ವರ್ಣಪೀಠೇ ವಾ -ಭದ್ರಾಸನೇ ಉಪವೇಶ್ಯ, ಸರ್ವೌಷಧೀಯುಕ್ತಕಷಾಯೋದಕೇನ ಸ್ನಾಪಯೇತ್ । ತತಃ ಈಶಾನ್ಯೇ ಕಲಶಂ ಸ್ಥಾಪಯಿತ್ವಾ ಕಲಶವಿಧಿನಾ ಪೂರ್ಣಪಾತ್ರ ನಿಧಾನಾಂತಂ ಕೃತ್ವಾ, ಪೂರ್ಣಪಾತ್ರೋಪರಿ ಯಥಾಶಕ್ತಿ ಸ್ವರ್ಣಾದಿ ನಿರ್ಮಿತಾಃ ಧಾತೃ-ವಹ್ನಿ-ಸೋಮ-ವಾಯು-ಪರ್ವತ-ಕೇಶವ ಪ್ರತಿಮಾಃ ಕೃತಾಗ್ನ್ಯುತ್ತಾರಣಾಃ ನಿಧಾಯ, ಯಥಾವಿಭವಂ ಪೂಜಯೇತ್ । ಗ್ರಹಾಂಶ್ಚ ಪ್ರತಿಷ್ಠಾಪ್ಯ ಪೂಜಯೇತ್ । ತತೋಽಗ್ನಿಂ ಪ್ರತಿಷ್ಠಾಪ್ಯ ನವಗ್ರಹಾದಿ ಕೀರ್ತನಾಂತೇ ಧಾತಾರಂ ಸಕೃತ್ ಚರುಣಾ, ವಹ್ನಿ-ಸೋಮ-ವಾಯು-ಪರ್ವತ-ಕೇಶವಾನ್ ಸಕೃತ್ ಸಕೃತ್ ಆಜ್ಯೇನ ಚರ್ವಾಜ್ಯಶೇಷೇಣ ಅಗ್ನಿಂ ಸ್ವಿಷ್ಟಕೃತಂ ಇತ್ಯಾದಿ[೧೨] ಅನ್ವಾಧಾನಂ ಕುರ್ಯಾತ್। ಆಜ್ಯ ಭಾಗಾಂತಂ ಕರ್ಮಕೃತ್ವಾ, ಅನ್ವಾಧಾನೋಕ್ತ ಕ್ರಮೇಣ ಪ್ರಧಾನಂ ಜುಹುಯಾತ್, ಸ್ವಿಷ್ಟಕೃದಾದಿ ಪ್ರಾಯಶ್ಚಿತ್ತಾಂತಂ ಹುತ್ವಾ, ಬಲಿ ಪೂರ್ಣಾಹುತ್ಯಾದಿ ವಿಧಾಯ, ಧಾತ್ರಾದಿ ಕಲಶೋದಕೇನ, ನವಗ್ರಹ ಕಲಶೋದಕೇನ ಚ ಅಭಿಷೇಕಂ ಕಾರ್ಯಃ । ತತೋ ಯಜಮಾನಃ ಆಚಾರ್ಯಾದಿಭ್ಯೋ ಪ್ರತಿಮಾ ಕಲಶ ಫಲಾದೀನ್ ದತ್ವಾ ಭೂಯಸೀಂ ದಕ್ಷಿಣಾಂ ಚ ದದ್ಯಾತ್ ।

ಯಥಾಶಕ್ತಿ ಸಪ್ತಾಹಂ ಬ್ರಾಹ್ಮಣಾನ್ ಭೋಜಯೇತ್ । ಅಷ್ಟಮೇಹನಿ ಯಥಾ ಶಕ್ತಿ ಕಾಂಚನಾದಿ ದದ್ಯಾತ್। ತಾವತ್ ಬ್ರಹ್ಮಚರ್ಯವ್ರತೇ ಸ್ಥಿತ್ವಾ ಅಂತೇ ಕೃಷ್ಣಾರ್ಪಣಂ ಕುರ್ಯಾತ್ ।

ಷಷ್ಠಮಾಸೇ ಅಷ್ಟಮೇವಾ ಮಾಸೇ ದಂತಜನನೇ ತು ಧಾತ್ರಾದಿ ಷಡ್‌ದೇವತಾ ಸ್ಥಾನೇ ಕೇವಲಂ ಬೃಹಸ್ಪತಿಂ ಪೂಜಯೇತ್ । ಹೋಮೇ ಚ ನವಗ್ರಹಾದ್ಯಂತೇ ಬೃಹಸ್ಪತಿಂ ದಧಿಮಧುಘೃತಾಕ್ತೈಃ ಅಶ್ವತ್ಥ ಸಮಿದ್ಭಿಃ ಅಷ್ಟೋತ್ತರಶತಾಹುತ್ಯಾ, ಶೇಷೇಣೇತ್ಯಾದಿ. ಅನ್ಯತ್ ಸರ್ವಂ ಪೂರ್ವವತ್ ।

ಅತ್ರ ನವಗ್ರಹಾದಿಭ್ಯಃ ಇತರಾಣಾಂ ನಾಮಮಂತ್ರೇಣೈವ ಪೂಜಾ ಹೋಮಶ್ಚ ಇತಿ ದ್ರಷ್ಟವ್ಯಂ । ಶಾಂತಿ ಸಾರೇ ತು ಇಂದ್ರಸ್ಯ ಯತ ಇಂದ್ರ ಭಯಾಮಹೇ ಇತಿ ಮಂತ್ರಃ ಉಕ್ತಃ ॥

॥ ಇತಿ ಸದಂತ ಊರ್ಧ್ವದಂತಾದಿ ಜನನಶಾಂತಿಃ ॥



೧೨. ಸ್ಥಾಲೀಪಾಕೇನ ಧಾತಾರಂ ಪೂಜಯೇತ್ತದನಂತರಮ್ । ......ಪೂಜಯೇದತ್ರ ವಹ್ನಿಂ ಸೋಮಂ ಸಮೀರಣಮ್ । ಪರ್ವತಾಂಶ್ಚ ತಥಾಖ್ಯಾತಾನ್ ದೇವದೇವಂ ಚ ಕೇಶವಮ್ । ಏತೇಷಾಮೇವ ಜುಹುಯಾದ್ ಘೃತಮಗ್ನೌ ಯಥಾ ವಿಧಿ ॥

# ಅಥ ಭದ್ರಾ ಜನನಶಾಂತಿಃ

ಭದ್ರಾ ಕರಣದಲ್ಲಿ ಶಿಶು ಜನನವಾದರೆ ಅನಿಷ್ಟವಿದೆ. ಇದರಿಂದ ಮಗುವಿಗೆ ವಿಶೇಷ ಅನಿಷ್ಟವಿದ್ದು ಗೋಮುಖಪ್ರಸವವನ್ನು ನಡೆಸಬೇಕೆಂದು ಪ್ರಯೋಗಗ್ರಂಥ ಗಳಿಂದ ತಿಳಿಯುತ್ತದೆ.

**ಪ್ರಯೋಗಃ**

ಕರ್ತಾ ಗೋಮುಖಪ್ರಸವಂ ಕೃತ್ವಾ, ದೇಶಕಾಲೌ ಸಂಕೀರ್ತ್ಯ, ಮಮಾಸ್ಯ ಶಿಶೋಃ ಭದ್ರಾಜನನ ಸೂಚಿತ ಸಕಲಾರಿಷ್ಟ ನಿವಾರಣದ್ವಾರಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಗರ್ಗೋಕ್ತಾಂ ಶಾಂತಿಂ ಕರಿಷ್ಯೇ ಇತಿ ಸಂಕಲ್ಪ್ಯ, ನಾಂದೀಶ್ರಾದ್ಧಾಂತಂ ಕರ್ಮ ಕೃತ್ವಾ ಆಚಾರ್ಯವರಣಂ ಕುರ್ಯಾತ್ ।

ಆಚಾರ್ಯಃ ಸ್ಥಲಶುದ್ಧ್ಯಾದಿ ವಿಧಾಯ, ಸ್ಥಂಡಿಲಾತ್ ಪೂರ್ವಭಾಗೇ ಪಂಚ-ಕಲಶಾನ್ ಕಲಶವಿಧಿನಾ ಸ್ಥಾಪಯೇತ್ । ತತ್ರ ಮಧ್ಯಕುಂಭೇ ಭದ್ರಾಂ ಪೂರ್ವಾದಿ-ಕ್ರಮೇಣ ಸೂರ್ಯಂ-ರುದ್ರಂ-ಗಣಪತಿಂ-ಋಷಭಂ ಚ ಯಥಾಶಕ್ತಿ ಸುವರ್ಣಾದಿ ನಿರ್ಮಿತಾಃ ತತ್ತದ್ದೇವತಾ ಪ್ರತಿಮಾಃ ನಿಕ್ಷಿಪ್ಯ ತತ್ತನ್ಮಂತ್ರೈರಾವಾಹ್ಯ ಪೂಜಯೇತ್ ।

ಭದ್ರಾ ಅಗ್ನೇರಿತ್ಯಸ್ಯ ವಾಧ್ರ್ಯಶ್ವಃ ಸುಮಿತ್ರಋಷಿಃ । ಜಗತೀಛಂದಃ । ಭದ್ರಾ(ಅಗ್ನಿಃ) ದೇವತಾ । ಆವಾಹನೇ ವಿನಿಯೋಗಃ ॥

**ಓಂ ಭದ್ರಾ ಅಗ್ನೇರ್ವಾಧ್ರ್ಯಶ್ವಸ್ಯ ಸಂದೃಶೋ ವಾಮೀ ಪ್ರಣೀತಿಃ ಸುರಣಾ ಉಪೇತಯಃ । ಯದೀಂ ಸುಮಿತ್ರಾ ವಿಶೋ ಅಗ್ರ ಇಂಧತೇ ಘೃತೇನಾಹುತೋ ಜರತೇ ದವಿದ್ಯುತತ್** ॥ [೧೦-೬೯-೧]

ಆ ಕೃಷ್ಣೇನ ಇತ್ಯಸ್ಯ ಆಂಗಿರಸೋ ಹಿರಣ್ಯಸ್ತೂಪಋಷಿಃ । ತ್ರಿಷ್ಟುಪ್‌ಛಂದಃ । ಸೂರ್ಯೋದೇವತಾ । ಆವಾಹನೇ ವಿನಿಯೋಗಃ ॥

**ಓಮ್ ಆ ಕೃಷ್ಣೇ ನ ರಜಸಾ** .................... **ಭುವನಾನಿ ಪಶ್ಯನ್** ॥ (೧-೩೫-೨)

ಕದ್ರುದ್ರಾಯೇತ್ಯಸ್ಯ ಘೌರಃ ಕಣ್ವಋಷಿಃ । ಗಾಯತ್ರೀಛಂದಃ । ರುದ್ರೋದೇವತಾ । ಆವಾಹನೇ ವಿನಿಯೋಗಃ ॥

**ಓಂ ಕದ್ರುದ್ರಾಯ ಪ್ರಚೇತಸೇ**.................... **ಶಂತಮಂ ಹೃದೇ** ॥ (೧-೪೩-೧)

ಗಣಾನಾಂ ತ್ವಾ ಇತ್ಯಸ್ಯ ಭಾರ್ಗವಃ ಶೌನಕಃ ಗೃತ್ಸಮದಋಷಿಃ । ಜಗತೀಛಂದಃ । ಗಣಪತಿರ್ದೇವತಾ । ಆವಾಹನೇ...... ॥

**ಓಂ ಗಣಾನಾಂ ತ್ವಾ** ..................... **ಸೀದ ಸಾದನಮ್** ॥ (೨-೨೩-೧)

ಋಷಭಂ ಮಾ ಇತ್ಯಸ್ಯ ವೈರಾಜಃ ಋಷಭಋಷಿಃ । ಅನುಷ್ಟುಪ್‌ಛಂದಃ । ಋಷಭೋ ದೇವತಾ ॥ ಆವಾಹನೇ ವಿನಿಯೋಗಃ ॥

**ಓಮ್ ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಮ್ । ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಮ್** ॥ ೧ ॥ (೧೦-೧೬೬-೧)

ತತಃ ಗ್ರಹಾನ್ ಪ್ರತಿಷ್ಠಾಪ್ಯ ಕಲಶಂ ಚ ಸಂಸ್ಥಾಪ್ಯ ಯಥಾ ವಿಭವಂ ಗ್ರಹಾನ್ ಪೂಜಯೇತ್ । ತತೋऽಗ್ನಿಂ ಪ್ರತಿಷ್ಠಾಪ್ಯ ಅನ್ವಾದಧ್ಯಾತ್ । ನವಗ್ರಹಾದಿ ಕೀರ್ತನಾಂತೇ –ಭದ್ರಾಂ ಸೂರ್ಯಂ ರುದ್ರಂ ಗಣಪತಿಂ ಋಷಭಂ ಚ ಏತಾಃ ಪ್ರಧಾನದೇವತಾಃ ಸಮಿತ್–ಚರು–ಆಜ್ಯ–ತಿಲೈಃ ಪ್ರತ್ಯೇಕಂ ಪ್ರತಿದ್ರವ್ಯಂ ಅಷ್ಟೋತ್ತರಶತ/ಅಷ್ಟಾವಿಂಶತಿ ಸಂಖ್ಯಾಭಿರಾಹುತಿಭಿಃ ಶೇಷೇಣೇತ್ಯಾದಿ । ಅನ್ವಾಧಾನ ಕ್ರಮೇಣ ಪ್ರಧಾನಂ ಹುತ್ವಾ, ಪ್ರಾಯಶ್ಚಿತ್ತಾಂತೇ ಬಲಿಂ ಚ ದತ್ವಾ, ಪೂರ್ಣಾಹುತ್ಯಂತೇ ಶಿಶುಸಹಿತಂ ಸಪತ್ನೀಕಂ ಯಜಮಾನಂ ಅಭಿಷಿಂಚೇತ್ । ತತೋ ಯಜಮಾನಃ ರಕ್ಷಾಧಾರಣ ಕಲಶದಾನಾದಿ ವಿಧಾಯ, ನಿರೀಕ್ಷಿತಾಜ್ಯದಾನ ಫಲದಾನಾದಿ ವಿಧಾಯ, ಯಥಾ ವಿಭವಂ ಬ್ರಾಹ್ಮಣಾನ್ ಭೋಜಯಿತ್ವಾ, ಶೇಷಂ ಸಮಾಪ್ಯ ಕೃಷ್ಣಾರ್ಪಣಂ ಕುರ್ಯಾತ್ ।

⏭ ⏮

# ಅಧೋಮುಖ ಜನನಶಾಂತಿಃ

ಅಧೋಮುಖಜನನವಾಗಿದ್ದರೆ ಶಿಶುವಿಗೆ ಅನಿಷ್ಟವಿದ್ದು ಬ್ರಹ್ಮಕರ್ಮಸಮುಚ್ಚಯದಲ್ಲಿ ಪ್ರಯೋಗವನ್ನು ಸೂಚಿಸಿದ್ದಾರೆ.

ಎರಡು ಕಲಶಗಳು. ಒಂದು ಪ್ರಧಾನದೇವತೆಗೆ. ಇನ್ನೊಂದು ನವಗ್ರಹರಿಗೆ. ಪ್ರಧಾನಕಲಶದಲ್ಲಿ ತ್ರ್ಯಂಬಕಮಂತ್ರದಿಂದ ರುದ್ರದೇವರ ಪ್ರತಿಮೆಯಲ್ಲಿ ಆರಾಧನೆ. ನಾಲ್ಕು ರುದ್ರಸೂಕ್ತಗಳು ಹಾಗೂ ನಾಲ್ಕು ಮಂತ್ರಗಳನ್ನು ಹನ್ನೊಂದು ಬಾರಿ ಆವರ್ತನೆ ಮಾಡಬೇಕು. ಅಥವಾ ಯಾಜುಷರುದ್ರಪ್ರಶ್ನವನ್ನು ಹನ್ನೊಂದು ಬಾರಿ ಆವರ್ತನೆ ಮಾಡಬಹುದು.

ನವಗ್ರಹಯಾಗದ ಜೊತೆಗೆ ತ್ರ್ಯಂಬಕಮಂತ್ರದಿಂದ ರುದ್ರದೇವರಿಗೆ ಸಮಿತ್–ಚರು–ಆಜ್ಯ–ತಿಲ ಎಂಬ ನಾಲ್ಕು ದ್ರವ್ಯಗಳಿಂದ ಆಹುತಿ. ಇವಿಷ್ಟು ಹೋಮದ ಕ್ರಮ.

ಅಭಿಷೇಕಕ್ಕೆ ಮೊದಲು ಮಗುವನ್ನು ಹತ್ತಿಯ ರಾಶಿಯಲ್ಲಿ ಮಲಗಿಸಿ ತಾಯಿಯು ಮಗುವಿಗೆ ಬೆನ್ನುಮಾಡಿ ಕೂರಬೇಕು. ಬ್ರಾಹ್ಮಣರು ಆಶೀರ್ವಾದಪೂರ್ವಕವಾಗಿ ಆ ಮಗುವನ್ನು ತಾಯಿಯ ಮುಂಭಾಗಕ್ಕೆ ಬಂದು ನೀಡಬೇಕು. ಆ ಕಾಲದ ಮಂತ್ರ ಹೀಗಿದೆ:

> **ಬಾಲೇऽಸ್ಮಾಭಿರಯಂ ಬಾಲಃ ಯುಷ್ಮದ್ದತ್ತಃ ಪ್ರಗೃಹ್ಯ ಚ ।**
> **ದೀರ್ಘಾಯುರಪಿ ಬಾಲೋऽಯಂ ಪೂರ್ವವತ್ ಕುಲವರ್ಧನಃ ॥**

ಅನಂತರ ತಂದೆತಾಯಿ ಹಾಗೂ ಮಗುವಿಗೆ ಅಭಿಷೇಕ ಮಾಡಬೇಕು. ಅನಂತರ ಯಜಮಾನನು ಪ್ರತಿಮಾದಾನಾದಿಗಳನ್ನು ಮಾಡಿ ಬ್ರಾಹ್ಮಣಭೋಜನ ಮಾಡಿಸಿ ಆಶೀರ್ವಾದ ಪಡೆದು ಕೃಷ್ಣಾರ್ಪಣ ಮಾಡಬೇಕು.

⏭ ⏮

# ಪ್ರಸವ ವೈಕೃತಶಾಂತಿಃ

ಜನ್ಮದಲ್ಲಿ ಆಗುವ ವಿಪರ್ಯಾಸಗಳು ದೇಶಕ್ಕೇ ಅನಿಷ್ಟವನ್ನು ನೀಡಬಲ್ಲವು. ಮನುಷ್ಯ ಸ್ತ್ರೀಯರಲ್ಲಿ ಪ್ರಾಣಿ, ಪಕ್ಷಿ, ಹಾವುಗಳ ಜನನ, ಸಾಕುಪ್ರಾಣಿಗಳಲ್ಲಿ ವಿಜಾತೀಯ ಪ್ರಾಣಿಗಳ ಜನನ ಹೀಗೆ ವಿಚಿತ್ರರೀತಿಯ ಜನ್ಮಗಳುಂಟಾದಲ್ಲಿ ಅದಕ್ಕೆ ತಕ್ಕ ಶಾಂತಿಯನ್ನು ನಡೆಸಲೇಬೇಕು.

ಅಲ್ಲದೆ ಮನುಷ್ಯರಲ್ಲಿ ಮನುಷ್ಯಶಿಶುವು ಜನಿಸುವಾಗಲೂ ಹಲ್ಲಿನ ಜೊತೆಗೆ ಹುಟ್ಟುವುದು, ಹಾಗೆಯೇ ವಿಕೃತಶರೀರ, ತಲೆಯಿಲ್ಲದ, ಅನೇಕ ತಲೆಗಳಿರುವ, ಅನೇಕ ಕಿವಿಗಳಿರುವ, ಕಿವಿಯಿಲ್ಲದ, ಕೊಂಬುಗಳಿರುವ, ಮೂರು ಅಥವಾ ನಾಲ್ಕು ಕೈಗಳಿರುವ, ಕೈಯಿಲ್ಲದಿರುವ, ಬಹಳ ಉದ್ದವಾದ ಕಿವಿಗಳು, ಆನೆಯಂತಹ ಕಿವಿಯಿರುವ ಶರೀರ, ಕೋತಿಯಂತೆ-ನಾಯಿಯಂತೆ-ಹುಲಿ-ಸಿಂಹಗಳಂತೆ ಲಕ್ಷಣವುಳ್ಳ ಶರೀರ ಇಂತಹ ವಿಕೃತಜನನಗಳು ಸಂಭವಿಸಿದಾಗ ರಾಜರುಗಳ ನಾಶ, ಉತ್ತಮ ವ್ಯಕ್ತಿಗಳ ನಾಶ, ಕುಲನಾಶ, ಧನನಾಶ ಮೊದಲಾದ ಅನಿಷ್ಟಗಳು ಸಂಭವಿಸಬಹುದು. ಹಾಗೆಯೇ ಮನುಷ್ಯರಿಗೆ-ಆನೆಗಳಿಗೆ-ಕುದುರೆಗಳಿಗೆ ಅವಳ ಮಕ್ಕಳ ಜನನವಾಗುವುದು ಅನಿಷ್ಟಸೂಚಕವಾಗಿದೆ. ಅದಕ್ಕಾಗಿ ಬ್ರಹ್ಮಶಾಂತಿಯನ್ನು ನಡೆಸಬೇಕು. ಏಕೆಂದರೆ ಇಂತಹ ಅನಿಷ್ಟಗಳ ಸೂಚನೆ ನೀಡುವವನು ಅವನೇ ಆಗಿದ್ದಾನೆ.

**ಬ್ರಹ್ಮಶಾಂತಿಯ ಕ್ರಮ ಹೀಗಿದೆ:**

೧೦೦೮ ಸಂಖ್ಯೆಯಲ್ಲಿ ಪ್ರತ್ಯೇಕವಾಗಿ ಚರು-ಆಜ್ಯ ಹಾಗೂ ಪಾಲಾಶ (ಮುತ್ತುಗ) ಸಮಿಧೆಗಳಿಂದ ಬ್ರಹ್ಮನಿಗೆ ಆಹುತಿ ನೀಡಬೇಕು. ಯೋಗ್ಯ ರೀತಿಯಲ್ಲಿ ಬ್ರಾಹ್ಮಣರನ್ನು ಸಂತೋಷಗೊಳಿಸಬೇಕು. ಅಲ್ಲದೆ ಗೋವು, ಧಾನ್ಯ, ಫಲ, ಚಿನ್ನ, ಎತ್ತು, ವಸ್ತ್ರ ಇವುಗಳನ್ನು ಯಥೇಚ್ಚವಾಗಿ ದಾನಮಾಡಬೇಕು. ರಾಜನಾದವನು ಪರಿವಾರ ಸಹಿತವಾಗಿ ಈ ಶಾಂತಿಯನ್ನು ನಡೆಸುವುದರಿಂದ ರಾಜ್ಯದ ಅನಿಷ್ಟ ನಿವಾರಣೆಯಾಗುವುದು.

ಅಲ್ಲದೆ ಇಂತಹ ವಿಕೃತಿಗಳನ್ನು ವಿಭಾಗಿಸಿ ಪ್ರತ್ಯೇಕವಾಗಿ ಬೇರೆ ಶಾಂತಿಗಳನ್ನು ಹೇಳಿದ್ದಾರೆ:

೧. ತಲೆಯೇ ಇಲ್ಲದ ಅಥವಾ ಎರಡು ಮೂರು ತಲೆಗಳಿರುವ ಜಂತುವಿನ ಜನನವಾದರೆ ಇದನ್ನು ಸೂರ್ಯಾದ್ಭುತ ಎಂದು ಕರೆಯುತ್ತಾರೆ. ಇದಕ್ಕಾಗಿ ಭಾನುವಾರದಂದು ಪರ್ವದಿನವನ್ನು ನೋಡಿಕೊಂಡು ಈ ಶಾಂತಿಯನ್ನು ನಡೆಸಬೇಕು.

**ಸೂರ್ಯಾದ್ಭುತಶಾಂತಿ**

ಸ್ವರ್ಣಪ್ರತಿಮೆಯಲ್ಲಿ ಸೂರ್ಯನ ಪೂಜೆ. ಹಾಗೂ ಮೊಸರು, ಜೇನು, ತುಪ್ಪಗಳನ್ನು ಸೇರಿಸಿ ಅದರಲ್ಲಿ ಮುಳುಗಿಸಿದ ಅರ್ಕ (ಎಕ್ಕೆ) ಸಮಿಧೆಗಳಿಂದ ಸಾವಿರಸಂಖ್ಯೆಯಲ್ಲಿ ಹೋಮ ಅಥವಾ ಪ್ರಸೃತಿಪ್ರಮಾಣ ಆಜ್ಯದಿಂದ ಸಾವಿರಸಂಖ್ಯೆಯಲ್ಲಿ ಸೂರ್ಯಮಂತ್ರದಿಂದ ಹೋಮ. ಗೋವು, ಚಿನ್ನ, ವಸ್ತ್ರಗಳ ದಾನ ಬ್ರಹ್ಮನಿಗೆ ದಕ್ಷಿಣೆ ಇವುಗಳಿಂದ ಎಲ್ಲ ದೋಷಗಳೂ ಪರಿಹಾರವಾಗುವವು.

೨. ಜಿಂಕೆಗಳಿಂದ ಸರ್ಪಗಳ-ಕಪ್ಪೆಗಳ ಜನನವಾದರೆ ಅಥವಾ ಅಮಾನುಷವ್ಯಕ್ತಿಗಳ ಜನನ ಮನುಷ್ಯರಲ್ಲಿ ಆದರೆ ಇದನ್ನು ಬೃಹಸ್ಪತಿ ಅದ್ಭುತ ಎಂದು ಕರೆದಿದ್ದು ಗುರುವಾರ ಪರ್ವದಿನದಲ್ಲಿ ಬೃಹಸ್ಪತ್ಯದ್ಭುತ ಶಾಂತಿಯನ್ನು ನಡೆಸಬೇಕು.

**ಬೃಹಸ್ಪತ್ಯದ್ಭುತಶಾಂತಿ**

ಔದುಂಬರ(ಅತ್ತಿ) ಸಮಿಧೆಗಳನ್ನು ಮೊಸರು ಹಾಗೂ ತುಪ್ಪದಲ್ಲಿ ಮುಳುಗಿಸಿ ಸಾವಿರ ಸಂಖ್ಯೆಯಲ್ಲಿ

ಬೃಹಸ್ಪತಿ ಮಂತ್ರದಿಂದ ಹೋಮ. ವಸ್ತ್ರ, ಸುವರ್ಣ, ಗೋವುಗಳನ್ನು ಬ್ರಾಹ್ಮಣರಿಗೆ ದಕ್ಷಿಣಾಸಹಿತವಾಗಿ ದಾನಮಾಡುವುದು. ಹೀಗೆ ಈ ದೋಷಗಳು ಪರಿಹಾರವಾಗುವವು.

೩. ಸ್ತ್ರೀಯರ ಗರ್ಭಪಾತ ಯಮಳ(ಅವಳಿ) ಜನನ, ಹಲ್ಲಿರುವ(ಸದಂತ) ಶಿಶುವಿನ ಜನನ, ಹುಟ್ಟಿದಕೂಡಲೇ ಶಿಶು ನಗುವುದು ಇಂಥವುಗಳನ್ನು ಬುಧಾದ್ಭುತ ಎಂದು ಕರೆದಿದ್ದು ಬುಧಾದ್ಭುತಶಾಂತಿ ನಡೆಸಬೇಕು. ಗೋವಸ್ತ್ರ, ಹಿರಣ್ಯಗಳನ್ನು ದಾನಮಾಡುವುದು ಹಾಗೂ ಬುಧವಾರ ಪರ್ವದಿನದಂದು ಬುಧಪೂಜೆ ಮಾಡುವುದು ('ಧರ್ಮಸಿಂಧು'ವಿನಲ್ಲಿ ಯಾತ್ರೆ–ಪೂಜೆ–ಹೋಮ ನಡೆಸಬೇಕೆಂದು ತಿಳಿಸಿದ್ದು ಹೋಮದ್ರವ್ಯ ವನ್ನು ತಿಳಿಸಿಲ್ಲ).

ಸಿಂಹದಲ್ಲಿ ರವಿ ಇರುವಾಗ ಮನೆಯ ಗೋವು ಕರು ಹಾಕಿದರೆ ಆರು ಮಾಸಗಳಲ್ಲಿ ಯಜಮಾನನ ಮರಣವಾದೀತು. ಅದಕ್ಕಾಗಿ ಶಾಂತಿಯನ್ನು ನಡೆಸಬೇಕು.[೧೩]

ಆ ಗೋವನ್ನು ತತ್‌ಕ್ಷಣ ದಾನಮಾಡಿ, ಶುಭದಿನದಲ್ಲಿ ವ್ಯಾಹೃತಿಯಿಂದ ತುಪ್ಪದ ಜೊತೆಗೆ ಬಿಳಿಸಾಸಿವೆಯನ್ನು ಹತ್ತುಸಾವಿರ ಸಂಖ್ಯೆಯಲ್ಲಿ ಹೋಮಿಸಬೇಕು.

ಅಸ್ಯವಾಮೀಯ ಸೂಕ್ತ (ಋ ೧–೧೬೪ [ಉಪನಯನಸಂಸ್ಕಾರದಲ್ಲಿ ಬಂದಿದೆ]) ಮತ್ತು ತದ್ವಿಷ್ಣೋಃ ಎಂಬ ಮಂತ್ರದಿಂದ ಘೃತಯುಕ್ತವಾದ ಎಳ್ಳಿನಿಂದ ನೂರಎಂಟಕ್ಕೆ ಕಡಿಮೆ ಇಲ್ಲದಂತೆ ಹೋಮಿಸಬೇಕು. ಜೊತೆಗೆ ಮೃತ್ಯುಂಜಯಮಂತ್ರದಿಂದ (ತ್ರ್ಯಂಬಕಂ ಯಜಾಮಹೇ ಋ. ೭–೫೯–೧೨) ಹತ್ತುಸಾವಿರ ಸಂಖ್ಯೆಯಲ್ಲಿ ಹೋಮಿಸಬೇಕು. ಶ್ರೀಸೂಕ್ತ ಹಾಗೂ ಶಾಂತಿಸೂಕ್ತಗಳಿಂದ ಸ್ನಾನವನ್ನು ನಡೆಸಬೇಕು.

ಇವಿಷ್ಟು ಬ್ರಹ್ಮಕರ್ಮಸಮುಚ್ಚಯದಲ್ಲಿ ಕೌಸ್ತುಭಗ್ರಂಥದಿಂದ ಉದ್ಧೃತವಾದ ವಿಕೃತ ಜನನಶಾಂತಿಯ ಕ್ರಮಗಳು.

ಇನ್ನು 'ವಿಧಾನ ಪಾರಿಜಾತ'ದಲ್ಲಿ ಪದ್ಮಪುರಾಣದಿಂದ ಉದ್ಧೃತವಾದ ಕ್ರಮ ಹೀಗಿದೆ:

ಶಿಶುವಿನ ಜನನವಾಗುವ ಕಾಲದಲ್ಲಿ ಹೀನಾಂಗವಾದ ಶಿಶು, ಅಧಿಕಾಂಗವಾದ ಶಿಶು, ದಂತಸಹಿತವಾದ ಶಿಶು ಜನಿಸಿದರೆ ಅಥವಾ ಜನಿಸಿದ ಕೂಡಲೇ ಶಿಶುವು ಕಣ್‌ಬಿಟ್ಟು ನೋಡುವುದು, ಮಾತನಾಡುವುದು, ನಗುವುದು ಇವುಗಳನ್ನು ಮಾಡಿದರೆ, ಜನಿಸುವ ಕಾಲದಲ್ಲೇ ಮೀಸೆ ಬಂದಿದ್ದರೆ ಅಥವಾ ಎರಡು ಹುಬ್ಬುಗಳ ಮಧ್ಯೆ ಸ್ಪಷ್ಟವಾಗಿ ರೋಮಗಳಿದ್ದರೆ ಅಥವಾ ವಿಜಾತೀಯವಾಗಿ ಪ್ರಾಣಿಗಳಂತೆ ಅಂದರೆ ಸಿಂಹ, ಹುಲಿ, ತೋಳ, ನಾಯಿ, ಬೆಕ್ಕು, ಹಾವುಗಳಂತೆ ಶಿಶು ಜನಿಸಿದರೆ ಇದರಿಂದ ತಂದೆತಾಯಿಯರಿಗೆ ಮೃತ್ಯುಭಯವನ್ನು ನೀಡುವವು. ಈ ರೀತಿಯ ಅನಿಷ್ಟ ಸೂಚನೆಗಳಿಗೆ ಶಾಂತಿಯನ್ನು ನಡೆಸಬೇಕು. ಆ ಶಾಂತಿಯ ವಿಧಾನ ಹೀಗಿದೆ:

### ಪದ್ಮಪುರಾಣೋಕ್ತ ಪ್ರಸವವೈಕೃತಶಾಂತಿ:

ಯಾರಿಗೆ ಇಂತಹ ವಿಕೃತಜನನವಾಗಿದೆಯೋ ಅಂತಹವರಿಗೆ ಈ ಶಾಂತಿಯು ವಿಹಿತ. ಹತ್ತುದಿನಗಳು

೧೩. ಮಾಘಮಾಸದ ಬುಧವಾರದಲ್ಲಿ ಎಮ್ಮೆ ಕರುಹಾಕುವುದ, ಶ್ರಾವಣಮಾಸದ ಹಗಲಿನಲ್ಲಿ ಕುದುರೆ ಮರಿಹಾಕುವುದೂ ಅನಿಷ್ಟವಾಗಿದ್ದು ಇದೇ ಶಾಂತಿಯನ್ನು ನಡೆಸಬೇಕು. ಶಾಂತಿಸಾರದಲ್ಲಿ ಈ ಎರಡಕ್ಕೆ ಬೇರೆ ಶಾಂತಿಯನ್ನು ಸೂಚಿಸಿದ್ದಾರೆ. ಸೌರಮಂತ್ರಗಳಿಂದ (ಸಂಕ್ರಮಣ ಶಾಂತಿಯಲ್ಲಿ ನೋಡಿ) ಆಹುತಿ ಮತ್ತು ಸೂರ್ಯನಿಗೆ ಎಳ್ಳು–ಆಜ್ಯ ಮತ್ತು ಸಕ್ಕರೆಯ ಪಾಯಸದಿಂದ ಸಾವಿರ ಆಹುತಿ. ಎಳ್ಳು–ಲೋಹ–ಚಿನ್ನ–ಹತ್ತಿ–ಉಪ್ಪು–ಸಪ್ತಧಾನ್ಯ–ಭೂಮಿ–ಗೋವು ಈ ಎಂಟರ ದಾನ. ಉಳಿದುದು ಈ ಹಿಂದಿನ ಶಾಂತಿಗಳಂತೆ.

ಕಳೆದನಂತರ ಕಲಶಪ್ರತಿಷ್ಠಾಪನೆ ಮಾಡಿ ವರುಣನನ್ನು ಆವಾಹಿಸಿ, ನದೀದೇವತೆಗಳನ್ನು ಆವಾಹಿಸಿ, ಯಥಾಶಕ್ತಿ ಪೂಜಿಸಬೇಕು. ಅನಂತರ ವರುಣಮಂತ್ರಗಳನ್ನು ಪಠಿಸುತ್ತ ದಂಪತಿಯರಿಗೆ ಮತ್ತು ವಿಕೃತರೂಪವುಳ್ಳ ಮಗುವಿಗೆ ಅಭಿಷೇಕ ಮಾಡಬೇಕು. ಅನಂತರ ಯಜಮಾನನು ವಿಕೃತಿಯನ್ನು ಉಲ್ಲೇಖಿಸಿ ಸಂಕಲ್ಪಪೂರ್ವಕವಾಗಿ ಆಚಾರ್ಯವರಣೆ ಮಾಡಬೇಕು.

ಮನೆಯ ಉತ್ತರ ಭಾಗದಲ್ಲಿ ಸ್ಥಂಡಿಲವನ್ನು ನಿರ್ಮಿಸಿ ಪುಣ್ಯಾಹವಾಚನದ ನಂತರ ಚಿನ್ನದಿಂದ ಮಾಡಿದ ಯಮನ ಪ್ರತಿಮೆಯನ್ನು ಪೂಜಿಸಬೇಕು.

ನಾಲ್ಕು ಭುಜಗಳಿಂದ ಕೂಡಿದ, ಕೆಳಗಿನ ಎಡಹಸ್ತದಲ್ಲೇ ಗದೆ, ಬಲಹಸ್ತದಲ್ಲಿ ಕಾಲದಂಡ, ಮೇಲಿನ ಎಡಹಸ್ತದಲ್ಲಿ ಹಲ, ಬಲಹಸ್ತದಲ್ಲಿ ಖಡ್ಗ, ಪಿಂಗಲವರ್ಣದ ಕೂದಲು, ಕಣ್ಣು ಹಾಗೂ ಮೀಸೆಗಳಿಂದ ಕೂಡಿದ ಆ ಪ್ರತಿಮೆಯನ್ನು ಕಣಗಿಲೆ ಹೂವುಗಳಿಂದ ಅರ್ಚಿಸಬೇಕು. ಹೊಸದಾದ ಜೊತೆವಸ್ತ್ರವನ್ನು ಸಮರ್ಪಿಸಬೇಕು.

**ಯಮಃ ಪ್ರೇತಸಖಃ ಕಾಲಃ ಶ್ರಾದ್ಧದೇವ ಮಹಾಮತೇ ।**
**ಕಾಲದಂಡಧರಃ ಶ್ರೀಮಾನ್ ವೈವಸ್ವತ ನಮೋಽಸ್ತು ತೇ ॥**

ಅನಂತರ ಅಗ್ನಿಯನ್ನು ಪ್ರತಿಷ್ಠಾಪಿಸಿ ತನ್ನ ಶಾಖಾಕ್ರಮದಂತೆ ಕೃಣುಷ್ವ ಪಾಜಃ (ಋ. ೪-೪-೧) ಎಂಬ ಮಂತ್ರದಿಂದ ತುಪ್ಪ-ಎಳ್ಳು-ಅಕ್ಕಿ ಈ ಮೂರೂ ದ್ರವ್ಯಗಳನ್ನು ಸಾವಿರ ಸಂಖ್ಯೆಯಲ್ಲಿ ಹೋಮಿಸಬೇಕು. ಈಶಾನ್ಯದಲ್ಲಿ ಪ್ರತಿಷ್ಠಾಪಿಸಿದ ಕಲಶದಲ್ಲಿ ರಕ್ಷೋಘ್ನಮಂತ್ರಗಳನ್ನು

**ಓಂ ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾಁ ಇಭೇನ । ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥ ೧ ॥ ತವ ಭ್ರಮಾಸ ಆಶುಯಾ ಪತಂತ್ಯನು ಸ್ಪೃಶ ಧೃಷತಾ ಶೋಶುಚಾನಃ । ತಪೂಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿ ಸೃಜ ವಿಷ್ವಗುಲ್ಕಾಃ ॥ ೨ ॥ ಪ್ರತಿ ಸ್ಪಶೋ ವಿ ಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ ಅದಬ್ಧಃ । ಯೋ ನೋ ದೂರೇ ಅಘಶಂಸೋ ಯೋ ಅಂತ್ಯಗ್ನೇ ಮಾಕಿಷ್ಟೇ ವ್ಯಥಿರಾ ದಧರ್ಷೀತ್ ॥ ೩ ॥ ಉದಗ್ನೇ ತಿಷ್ಠ ಪ್ರತ್ಯಾತನುಷ್ವ ನ್ಯ(ಅ)ಗ್ಂ ಮಿತ್ರಾಁ ಓಷತಾತ್ತಿಗ್ಮಹೇತೇ । ಯೋ ನೋ ಅರಾತಿಂ ಸಮಿಧಾನ ಚಕ್ರೇ ನೀಚಾ ತಂ ಧಕ್ಷ್ಯತಸಂ ನ ಶುಷ್ಕಮ್ ॥ ೪ ॥ ಊರ್ಧ್ವೋ ಭವ ಪ್ರತಿ ವಿಧ್ಯಾಧ್ಯಸ್ಮದಾವಿಷ್ಕೃಣುಷ್ವ ದೈವ್ಯಾನ್ಯಗ್ನೇ । ಅವ ಸ್ಥಿರಾ ತನುಹಿ ಯಾತುಜೂನಾಂ ಜಾಮಿಮಜಾಮಿಂ ಪ್ರ ಮೃಣೀಹಿ ಶತ್ರೂನ್ ॥ ೫ ॥ ಸ ತೇ ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ ಗಾತುಮೈರತ್ । ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ ವಿ ದುರೋ ಅಭಿ ದ್ಯೌತ್ ॥ ೬ ॥ ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ । ಪಿಪ್ರೀಷತಿ ಸ್ವ ಆಯುಷಿ ದುರೋಣೇ ವಿಶ್ವೇದಸ್ಮೈ ಸುದಿನಾ ಸಾಸದಿಷ್ಟಿಃ ॥ ೭ ॥ ಅರ್ಚಾಮಿ ತೇ ಸುಮತಿಂ ಘೋಷ್ಯರ್ವಾಕ್ಸಂ ತೇ ವಾವಾತಾ ಜರತಾಮಿಯಂ**

ಗೀಃ । ಸ್ವಶ್ವಾಸ್ತ್ವಾ ಸುರಥಾ ಮರ್ಜಯೇಮಾಸ್ಮೇ ಕ್ಷತ್ರಾಣಿ ಧಾರಯೇರನು ದ್ಯೂನ್ ॥ ೮ ॥ ಇಹ ತ್ವಾ ಭೂರ್ಯಾ ಚರೇದುಪ ತ್ಮನ್ದೋಷಾವಸ್ತರ್ದೀದಿವಾಂಸಮನು ದ್ಯೂನ್ । ಕ್ರೀಳಂತಸ್ತ್ವಾ ಸುಮನಸಃ ಸಪೇಮಾಭಿ ದ್ಯುಮ್ನಾ ತಸ್ಥಿವಾಂಸೋ ಜನಾನಾಮ್ ॥ ೯ ॥ ಯಸ್ತ್ವಾ ಸ್ವಶ್ವಃ ಸುಹಿರಣ್ಯೋ ಅಗ್ನ ಉಪಯಾತಿ ವಸುಮತಾ ರಥೇನ । ತಸ್ಯ ತ್ರಾತಾ ಭವಸಿ ತಸ್ಯ ಸಖಾ ಯಸ್ತ ಆತಿಥ್ಯಮಾನುಷಗ್ಜುಜೋಷತ್ ॥ ೧೦ ॥ ಮಹೋರುಜಾಮಿ ಬಂಧುತಾ ವಚೋಭಿಸ್ತನ್ಮಾ ಪಿತುರ್ಗೋತಮಾದನ್ವಿಯಾಯ । ತ್ವಂ ನೋ ಅಸ್ಯ ವಚಸಶ್ಚಿಕಿದ್ಧಿ ಹೋತರ್ಯವಿಷ್ಠ ಸುಕ್ರತೋ ದಮೂನಾಃ ॥ ೧೧ ॥ ಅಸ್ವಪ್ನಜಸ್ತರಣಯಃ ಸುಶೇವಾ ಅತಂದ್ರಾಸೋಽವೃಕಾ ಅಶ್ರಮಿಷ್ಠಾಃ । ತೇ ಪಾಯವಃ ಸಧ್ರ್ಯಂಚೋ ನಿಷದ್ಯಾಗ್ನೇ ತವ ನಃ ಪಾಂತ್ವ-ಮೂರ ॥ ೧೨ ॥ ಯೇ ಪಾಯವೋ ಮಾಮತೇಯಂ ತೇ ಅಗ್ನೇ ಪಶ್ಯಂತೋ ಅಂಧಂ ದುರಿತಾದರಕ್ಷನ್ । ರರಕ್ಷ ತಾನ್ತ್ಸುಕೃತೋ ವಿಶ್ವವೇದಾದಿಪ್ಸಂತ ಇದ್ರಿಪವೋ ನಾಹ ದೇಭುಃ ॥ ೧೩ ॥ ತ್ವಯಾ ವಯಂ ಸಧನ್ಯ (ಅ)೧ ಸ್ತ್ವೋತಾಸ್ತವ ಪ್ರಣೀತ್ಯಶ್ಯಾಮ ವಾಜಾನ್ । ಉಭಾಶಂಸಾ ಸೂದಯ ಸತ್ಯತಾತೇಽನುಷ್ಠುಯಾ ಕೃಣುಹ್ಯಹ್ರಯಾಣ ॥ ೧೪ ॥ ಅಯಾ ತೇ ಅಗ್ನೇ ಸಮಿಧಾ ವಿಧೇಮ ಪ್ರತಿ ಸ್ತೋಮಂ ಶಸ್ಯಮಾನಂ ಗೃಭಾಯ । ದಹಾಶಸೋ ರಕ್ಷಸಃ ಪಾಹ್ಯ (ಅ)೧ ಸ್ಮಾನ್ದ್ರುಹೋ ನಿದೋ ಮಿತ್ರಮಹೋ ಅವದ್ಯಾತ್ ॥ ೧೫ ॥

ಓಂ ರಕ್ಷೋಹಣಂ ವಾಜಿನಮಾ ಜಿಘರ್ಮಿ ಮಿತ್ರಂ ಪ್ರಥಿಷ್ಠಮುಪ ಯಾಮಿ ಶರ್ಮ । ಶಿಶಾನೋ ಅಗ್ನಿಃ ಕ್ರತುಭಿಃ ಸಮಿದ್ಧಃ ಸ ನೋ ದಿವಾ ಸ ರಿಷಃ ಪಾತು ನಕ್ತಮ್ ॥ ೧ ॥ ಅಯೋದಂಷ್ಟ್ರೋ ಅರ್ಚಿಷಾ ಯಾತುಧಾನಾನುಪ ಸ್ಪೃಶ ಜಾತವೇದಃ ಸಮಿದ್ಧಃ । ಆ ಜಿಹ್ವಯಾ ಮೂರದೇವಾನ್ರಭಸ್ವ ಕ್ರವ್ಯಾದೋ ವೃಕ್ತ್ವ್ಯಪಿ ಧತ್ಸ್ವಾಸನ್ ॥ ೨ ॥ ಉಭೋಭಯಾವಿನ್ನುಪ ಧೇಹಿ ದಂಷ್ಟ್ರಾ ಹಿಂಸ್ರಃ ಶಿಶಾನೋಽವರಂ ಪರಂ ಚ । ಉತಾಂತರಿಕ್ಷೇ ಪರಿ ಯಾಹಿ ರಾಜನ್ಜಂಭೈಃ ಸಂ ಧೇಹ್ಯಭಿ ಯಾತುಧಾನಾನ್ ॥ ೩ ॥ ಯಜ್ಞೈರಿಷೂಃ ಸಂನಮಮಾನೋ ಅಗ್ನೇ ವಾಚಾ ಶಲ್ಯಾಁ ಅಶನಿಭಿರ್ದಿಹಾನಃ । ತಾಭಿರ್ವಿಧ್ಯ ಹೃದಯೇ ಯಾತುಧಾನಾನ್ಪ್ರತೀಚೋ ಬಾಹೂನ್ಪ್ರತಿ ಭಂಗ್ಧ್ಯೇಷಾಮ್ ॥ ೪ ॥ ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ ಹಿಂಸ್ರಾಶನಿರ್ಹರಸಾ ಹಂತ್ವೇನಮ್ । ಪ್ರ ಪರ್ವಾಣಿ ಜಾತವೇದಃ ಶೃಣೀಹಿ

ಕ್ರವಾತ್ಕ್ರ ವಿಷ್ಣುರ್ವಿ ಚಿನೋತು ವೃಕ್ಣಮ್ ॥ ೫ ॥ ಯತ್ರೇದಾನೀಂ ಪಶ್ಯಸಿ ಜಾತವೇದಸ್ತಿಷ್ಠಂತಮಗ್ನ ಉತ
ವಾ ಚರಂತಮ್ । ಯದ್ವಾಂತರಿಕ್ಷೇ ಪಥಿಭಿಃ ಪತಂತಂ ತಮಸ್ತಾ ವಿಧ್ಯ ಶರ್ವಾ ಶಿಶಾನಃ ॥ ೬ ॥
ಉತಾಲಬ್ಧಂ ಸ್ಪೃಣುಹಿ ಜಾತವೇದ ಆಲೇಭಾನಾದೃಷ್ಟಿಭಿರ್ಯಾತುಧಾನಾತ್ । ಅಗ್ನೇ ಪೂರ್ವೋ ನಿ
ಜಹಿ ಶೋಶುಚಾನ ಆಮಾದಃ, ಕ್ಷ್ವಿಂಕಾಸ್ತಮದಂತ್ವೇನೀಃ ॥ ೭ ॥ ಇಹ ಪ್ರ ಬ್ರೂಹಿ ಯತಮಃ ಸೋ
ಅಗ್ನೇ ಯೋ ಯಾತುಧಾನೋ ಯ ಇದಂ ಕೃಣೋತಿ । ತಮಾ ರಭಸ್ವ ಸಮಿಧಾ ಯವಿಷ್ಠ ನೃಚಕ್ಷಸಶ್ಚಕ್ಷುಷೇ
ರಂಧಯೈನಮ್ ॥ ೮ ॥ ತೀಕ್ಷ್ಣೇನಾಗ್ನೇ ಚಕ್ಷುಷಾ ರಕ್ಷ ಯಜ್ಞಂ ಪ್ರಾಂಚಂ ವಸುಭ್ಯಃ ಪ್ರಣಯ ಪ್ರಚೇತಃ ।
ಹಿಂಸ್ರಂ ರಕ್ಷಾಂಸ್ಯಭಿ ಶೋಶುಚಾನಂ ಮಾ ತ್ವಾ ದಭನ್, ಯಾತುಧಾನಾ ನೃಚಕ್ಷಃ ॥ ೯ ॥ ನೃಚಕ್ಷಾ ರಕ್ಷಃ
ಪರಿ ಪಶ್ಯ ವಿಕ್ಷು ತಸ್ಯ ತ್ರೀಣಿ ಪ್ರತಿ ಶೃಣೀಹ್ಯಗ್ರಾ । ತಸ್ಯಾಗ್ನೇ ಪೃಷ್ಟೀರ್ಹರಸಾ ಶೃಣೀಹಿ ತ್ರೇಧಾ ಮೂಲಂ
ಯಾತುಧಾನಸ್ಯ ವೃಶ್ಚ ॥ ೧೦ ॥ ತ್ರಿರ್ಯಾತುಧಾನಃ ಪ್ರಸಿತಿಂ ತ ಏತ್ವೃತಂ ಯೋ ಅಗ್ನೇ ಅನೃತೇನ
ಹಂತಿ । ತಮರ್ಚಿಷಾ ಸ್ಫೂರ್ಜಯನ್ ಜಾತವೇದಃ ಸಮಕ್ಷಮೇನಂ ಗೃಣತೇ ನಿ ವೃಂಗ್ಧಿ ॥ ೧೧ ॥
ತದಗ್ನೇ ಚಕ್ಷುಃ ಪ್ರತಿ ಧೇಹಿ ರೇಭೇ ಶಫಾರುಜಂ ಯೇನ ಪಶ್ಯಸಿ ಯಾತುಧಾನಮ್ । ಅಥರ್ವವಜ್ಜ್ಯೋತಿಷಾ
ದೈವ್ಯೇನ ಸತ್ಯಂ ಧೂರ್ವಂತಮಚಿತಂ ನ್ಯೋಷ ॥ ೧೨ ॥ ಯದಗ್ನೇ ಅದ್ಯ ಮಿಥುನಾ ಶಪಾತೋ
ಯದ್ವಾಚಸ್ತೃಷ್ಟಂ ಜನಯಂತ ರೇಭಾಃ । ಮನ್ಯೋರ್ಮನಸಃ ಶರವ್ಯಾ (ಆ)ಽಽ ಜಾಯತೇ ಯಾ ತಯಾ
ವಿಧ್ಯ ಹೃದಯೇ ಯಾತುಧಾನಾನ್ ॥ ೧೩ ॥ ಪರಾ ಶೃಣೀಹಿ ತಪಸಾ ಯಾತುಧಾನಾನ್ಪರಾಗ್ನೇ ರಕ್ಷೋ
ಹರಸಾ ಶೃಣೀಹಿ । ಪರಾರ್ಚಿಷಾ ಮೂರದೇವಾನ್ಛೃಣೀಹಿ ಪರಾಸುತೃಪೋ ಅಭಿ ಶೋಶುಚಾನಃ
॥ ೧೪ ॥ ಪರಾದ್ಯ ದೇವಾ ವೃಜಿನಂ ಶೃಣಂತು ಪ್ರತ್ಯಗೇನಂ ಶಪಥಾ ಯಂತು ತೃಷ್ಟಾಃ । ವಾಚಾಸ್ತೇನಂ
ಶರವ ಋಚ್ಛಂತು ಮರ್ಮನ್ವಿಶ್ವಸ್ಯೈತು ಪ್ರಸಿತಿಂ ಯಾತುಧಾನಃ ॥ ೧೫ ॥ ಯಃ ಪೌರುಷೇಯೇಣ
ಕ್ರವಿಷಾ ಸಮಂಕ್ತೇ ಯೋ ಅಶ್ವ್ಯೇನ ಪಶುನಾ ಯಾತುಧಾನಃ । ಯೋ ಅಘ್ನ್ಯಾಯಾ ಭರತಿ ಕ್ಷೀರಮಗ್ನೇ
ತೇಷಾಂ ಶೀರ್ಷಾಣಿ ಹರಸಾಪಿ ವೃಶ್ಚ ॥ ೧೬ ॥ ಸಂವತ್ಸರೀಣಂ ಪಯ ಉಸ್ರಿಯಾಯಾಸ್ತಸ್ಯ
ಮಾಶೀದ್ಯಾತುಧಾನೋ ನೃಚಕ್ಷಃ । ಪೀಯೂಷಮಗ್ನೇ ಯತಮಸ್ತಿತೃಪ್ಸಾತ್ತಂ ಪ್ರತ್ಯಂಚಮರ್ಚಿಷಾ ವಿಧ್ಯ
ಮರ್ಮನ್ ॥ ೧೭ ॥ ವಿಷಂ ಗವಾಂ ಯಾತುಧಾನಾಃ ಪಿಬಂತ್ವಾ ವೃಶ್ಚ್ಯಂತಾಮದಿತಯೇ
ದುರೇವಾಃ । ಪರೈನಾಂದೇವಃ ಸವಿತಾ ದದಾತು ಪರಾ ಭಾಗಮೋಷಧೀನಾಂ ಜಯಂತಾಮ್ ॥ ೧೮ ॥

ಸನಾದಗ್ನೇ ಮೃಣಸಿ ಯಾತುಧಾನಾನ್ನ ತ್ವಾ ರಕ್ಷಾಂಸಿ ಪೃತನಾಸು ಜಿಗ್ಯುಃ । ಅನು ದಹ ಸಹಮೂರಾನ್ಕ್ರವ್ಯಾದೋ ಮಾ ತೇ ಹೇತ್ಯಾ ಮುಕ್ಷತ ದೈವ್ಯಾಯಾಃ ॥ ೧೯ ॥ ತ್ವಂ ನೋ ಅಗ್ನೇ ಅಧರಾದುದಕ್ತಾತ್ತ್ವಂ ಪಶ್ಚಾದುತ ರಕ್ಷಾ ಪುರಸ್ತಾತ್ । ಪ್ರತಿ ತೇ ತೇ ಅಜರಾಸಸ್ತಪಿಷ್ಠಾ ಅಘಶಂಸಂ ಶೋಶುಚತೋ ದಹಂತು ॥ ೨೦ ॥ ಪಶ್ಚಾತ್ಪುರಸ್ತಾದಧರಾದುದಕ್ತಾತ್ಕವಿಃ ಕಾವ್ಯೇನ ಪರಿ ಪಾಹಿ ರಾಜನ್ । ಸಖೇ ಸಖಾಯಮಜರೋ ಜರಿಮ್ಣೇಽಗ್ನೇ ಮರ್ತಾಁ ಅಮರ್ತ್ಯಸ್ತ್ವಂ ನಃ ॥ ೨೧ ॥ ಪರಿ ತ್ವಾಗ್ನೇ ಪುರಂ ವಯಂ ವಿಪ್ರಂ ಸಹಸ್ಯ ಧೀಮಹಿ । ಧೃಷದ್ವರ್ಣಂ ದಿವೇದಿವೇ ಹಂತಾರಂ ಭಂಗುರಾವತಾಮ್ ॥ ೨೨ ॥ ವಿಷೇಣ ಭಂಗುರಾವತಃ ಪ್ರತಿ ಷ್ಮ ರಕ್ಷಸೋ ದಹ । ಅಗ್ನೇ ತಿಗ್ಮೇನ ಶೋಚಿಷಾ ತಪುರಗ್ರಾಭಿರ್ಋಷ್ಟಿಭಿಃ ॥ ೨೩ ॥ ಪ್ರತ್ಯಗ್ನೇ ಮಿಥುನಾ ದಹ ಯಾತುಧಾನಾ ಕಿಮೀದಿನಾ । ಸಂ ತ್ವಾ ಶಿಶಾಮಿ ಜಾಗೃಹ್ಯದಬ್ಧಂ ವಿಪ್ರ ಮನ್ಮಭಿಃ ॥ ೨೪ ॥ ಪ್ರತ್ಯಗ್ನೇ ಹರಸಾಹರಃ ಶೃಣೀಹಿ ವಿಶ್ವತಃ ಪ್ರತಿ । ಯಾತುಧಾನಸ್ಯ ರಕ್ಷಸೋ ಬಲಂ ವಿ ರುಜ ವೀರ್ಯಮ್ ॥ ೨೫ ॥

ಓಮ್ ಅಗ್ನೇ ಹಂಸಿ ನ್ಯ ಅತ್ರಿಣಂ ದೀದ್ಯನ್ಮರ್ತ್ಯೇಷ್ವಾ । ಸ್ವೇ ಕ್ಷಯೇ ಶುಚಿವ್ರತ ॥ ೧ ॥ ಉತ್ತಿಷ್ಠಸಿ ಸ್ವಾಹುತೋ ಘೃತಾನಿ ಪ್ರತಿ ಮೋದಸೇ । ಯತ್ತ್ವಾ ಸ್ರುಚಃ ಸಮಸ್ಥಿರನ್ ॥ ೨ ॥ ಸ ಆಹುತೋ ವಿ ರೋಚತೇಽಗ್ನಿರೀಳೇನ್ಯೋ ಗಿರಾ । ಸ್ರುಚಾ ಪ್ರತೀಕಮಜ್ಯತೇ ॥ ೩ ॥ ಘೃತೇನಾಗ್ನಿಃ ಸಮಜ್ಯತೇ ಮಧುಪ್ರತೀಕ ಆಹುತಃ । ರೋಚಮಾನೋ ವಿಭಾವಸುಃ ॥ ೪ ॥ ಜರಮಾಣಃ ಸಮಿಧ್ಯಸೇ ದೇವೇಭ್ಯೋ ಹವ್ಯವಾಹನ । ತಂ ತ್ವಾ ಹವಂತ ಮರ್ತ್ಯಾಃ ॥ ೫ ॥ ತಂ ಮರ್ತಾ ಅಮರ್ತ್ಯಂ ಘೃತೇನಾಗ್ನಿಂ ಸಪರ್ಯತ । ಅದಾಭ್ಯಂ ಗೃಹಪತಿಮ್ ॥ ೬ ॥ ಅದಾಭ್ಯೇನ ಶೋಚಿಷಾಗ್ನೇ ರಕ್ಷಸ್ತ್ವಂ ದಹ । ಗೋಪಾ ಋತಸ್ಯ ದೀದಿಹಿ ॥ ೭ ॥ ಸ ತ್ವಮಗ್ನೇ ಪ್ರತೀಕೇನ ಪ್ರತ್ಯೋಷ ಯಾತುಧಾನ್ಯಃ । ಉರುಕ್ಷಯೇಷು ದೀದ್ಯತ್ ॥ ೮ ॥ ತಂ ತ್ವಾ ಗೀರ್ಭಿರುರುಕ್ಷಯಾ ಹವ್ಯವಾಹಂ ಸಮೀಧಿರೇ । ಯಜಿಷ್ಠಂ ಮಾನುಷೇ ಜನೇ ॥ ೯ ॥

ಜಪಿಸಿ ಕೊನೆಗೆ ಶಂನಃ ಸೂಕ್ತವನ್ನು ಜಪಿಸಬೇಕು.

ಓಂ ಶಂ ನ ಇಂದ್ರಾಗ್ನೀ ಭವತಾಮವೋಭಿಃ ಶಂ ನ ಇಂದ್ರಾವರುಣಾ ರಾತಹವ್ಯಾ । ಶಮಿಂದ್ರಾಸೋಮಾ ಸುವಿತಾಯ ಶಂ ಯೋಃ ಶಂ ನ ಇಂದ್ರಾಪೂಷಣಾ ವಾಜಸಾತೌ ॥ ೧ ॥ ಶಂ

ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ । ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥ ೨ ॥ ಶಂ ನೋ ಧಾತಾ ಶಮು ಧರ್ತಾ ನೋ ಅಸ್ತು ಶಂ ನ ಉರೂಚೀ ಭವತು ಸ್ವಧಾಭಿಃ । ಶಂ ರೋದಸೀ ಬೃಹತೀ ಶಂ ನೋ ಅದ್ರಿಃ ಶಂ ನೋ ದೇವಾನಾಂ ಸುಹವಾನಿ ಸಂತು ॥ ೩ ॥ ಶಂ ನೋ ಅಗ್ನಿರ್ಜ್ಯೋತಿರನೀಕೋ ಅಸ್ತು ಶಂ ನೋ ಮಿತ್ರಾವರುಣಾವಶ್ವಿನಾ ಶಮ್ । ಶಂ ನಃ ಸುಕೃತಾಂ ಸುಕೃತಾನಿ ಸಂತು ಶಂ ನ ಇಷಿರೋ ಅಭಿ ವಾತು ವಾತಃ ॥ ೪ ॥ ಶಂ ನೋ ದ್ಯಾವಾಪೃಥಿವೀ ಪೂರ್ವಹೂತೌ ಶಮಂತರಿಕ್ಷಂ ದೃಶಯೇ ನೋ ಅಸ್ತು । ಶಂ ನ ಓಷಧೀರ್ವನಿನೋ ಭವಂತು ಶಂ ನೋ ರಜಸಸ್ಪತಿರಸ್ತು ಜಿಷ್ಣುಃ ॥ ೫ ॥ ಶಂ ನ ಇಂದ್ರೋ ವಸುಭಿರ್ದೇವೋ ಅಸ್ತು ಶಮಾದಿತ್ಯೇಭಿರ್ವರುಣಃ ಸುಶಂಸಃ । ಶಂ ನೋ ರುದ್ರೋ ರುದ್ರೇಭಿರ್ಜಲಾಷಃ ಶಂ ನಸ್ತ್ವಷ್ಟಾ ಗ್ನಾಭಿರಿಹ ಶೃಣೋತು ॥ ೬ ॥ ಶಂ ನಃ ಸೋಮೋ ಭವತು ಬ್ರಹ್ಮಶಂ ನಃ ಶಂ ನೋ ಗ್ರಾವಾಣಃ ಶಮು ಸಂತು ಯಜ್ಞಾಃ । ಶಂ ನಃ ಸ್ವರೂಣಾಂ ಮಿತಯೋ ಭವಂತು ಶಂ ನಃ ಪ್ರಸ್ವ (ಅ)ಗ್ಂ : ಶಮ್ವಸ್ತು ವೇದಿಃ ॥ ೭ ॥ ಶಂ ನಃ ಸೂರ್ಯ ಉರುಚಕ್ಷಾ ಉದೇತು ಶಂ ನಶ್ಚತಸ್ರಃ ಪ್ರದಿಶೋ ಭವಂತು । ಶಂ ನಃ ಪರ್ವತಾ ಧ್ರುವಯೋ ಭವಂತು ಶಂ ನಃ ಸಿಂಧವಃ ಶಮು ಸಂತ್ವಾಪಃ ॥ ೮ ॥ ಶಂ ನೋ ಅದಿತಿರ್ಭವತು ವ್ರತೇಭಿಃ ಶಂ ನೋ ಭವಂತು ಮರುತಃ ಸ್ವರ್ಕಾಃ । ಶಂ ನೋ ವಿಷ್ಣುಃ ಶಮು ಪೂಷಾ ನೋ ಅಸ್ತು ಶಂ ನೋ ಭವಿತ್ರಂ ಶಮ್ವಸ್ತು ವಾಯುಃ ॥ ೯ ॥ ಶಂ ನೋ ದೇವಃ ಸವಿತಾ ತ್ರಾಯಮಾಣಃ ಶಂ ನೋ ಭವಂತೂಷಸೋ ವಿಭಾತೀಃ । ಶಂ ನಃ ಪರ್ಜನ್ಯೋ ಭವತು ಪ್ರಜಾಭ್ಯಃ ಶಂ ನಃ, ಕ್ಷೇತ್ರಸ್ಯ ಪತಿರಸ್ತು ಶಂಭುಃ ॥ ೧೦ ॥ ಶಂ ನೋ ದೇವಾ ವಿಶ್ವದೇವಾ ಭವಂತು ಶಂ ಸರಸ್ವತೀ ಸಹ ಧೀಭಿರಸ್ತು । ಶಮಭಿಷಾಚಃ ಶಮು ರಾತಿಷಾಚಃ ಶಂ ನೋ ದಿವ್ಯಾಃ ಪಾರ್ಥಿವಾಃ ಶಂ ನೋ ಅಪ್ಯಾಃ ॥ ೧೧ ॥ ಶಂ ನಃ ಸತ್ಯಸ್ಯ ಪತಯೋ ಭವಂತು ಶಂ ನೋ ಅರ್ವಂತಃ ಶಮು ಸಂತು ಗಾವಃ । ಶಂ ನ ಋಭವಃ ಸುಕೃತಃ ಸುಹಸ್ತಾಃ ಶಂ ನೋ ಭವಂತು ಪಿತರೋ ಹವೇಷು ॥ ೧೨ ॥ ಶಂ ನೋ ಅಜ ಏಕಪಾದ್ದೇವೋ ಅಸ್ತು ಶಂ ನೋಽಹಿರ್ಬುಧ್ನ್ಯ (ಅ)ಗ್ಂಃ ಶಂ ಸಮುದ್ರಃ । ಶಂ ನೋ ಅಪಾಂ ನಪಾತ್ಪೇರುರಸ್ತು ಶಂ ನಃ ಪೃಶ್ನಿರ್ಭವತು ದೇವಗೋಪಾಃ ॥ ೧೩ ॥

ಆದಿತ್ಯಾ ರುದ್ರಾ ವಸವೋ ಜುಷಂತೇದಂ ಬ್ರಹ್ಮ ಕ್ರಿಯಮಾಣಂ ನವೀಯಃ । ಶೃಣ್ವಂತು ನೋ ದಿವ್ಯಾಃ ಪಾರ್ಥಿವಾಸೋ ಗೋಜಾತಾ ಉತ ಯೇ ಯಜ್ಞಿಯಾಸಃ ॥ ೧೪ ॥ ಯೇ ದೇವಾನಾಂ ಯಜ್ಞಿಯಾ ಯಜ್ಞಿಯಾನಾಂ ಮನೋರ್ಯಜತ್ರಾ ಅಮೃತಾ ಋತಜ್ಞಾಃ । ತೇ ನೋ ರಾಸಂತಾಮುರುಗಾಯಮದ್ಯ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೧೫ ॥

ಪ್ರಾಯಶ್ಚಿತ್ತಹೋಮದನಂತರ ದೀಪದ ಜೊತೆಗೆ ಬಲಿಯನ್ನು ನೀಡಬೇಕು. ಪೂರ್ಣಾಹುತಿಯನ್ನು ಮುಗಿಸಿ ಯಮವಾಹನವಾದ ಮಹಿಷ(ಕೋಣ)ವನ್ನು ಬೆನ್ನಿಗೆ ತಾಮ್ರ, ಗೊರಸಿಗೆ ಬೆಳ್ಳಿ, ಬಾಲದ ತುದಿಗೆ ರತ್ನಯುತವಾದ ಚಾಮರ, ಕಿವಿಗೆ ಚಿನ್ನ ಇವುಗಳಿಂದ ಅಲಂಕರಿಸಿ ವಿಧಿವತ್ತಾಗಿ ಯಮನನ್ನು ಪೂಜಿಸಿ ಖಡ್ಗದ ಜೊತೆಗೆ ಬ್ರಾಹ್ಮಣನಿಗೆ ದಾನ ಕೊಡಬೇಕು. ಜೊತೆಗೆ ದಕ್ಷಿಣೆಯಾಗಿ ಚಿನ್ನವನ್ನು ನೀಡಬೇಕು.

**ದಾನಮಂತ್ರ : ಯಮವಾಹ ನಮಸ್ತುಭ್ಯಂ ಅಕಾಲಮರಣಾಪಹ ।**
**ಲುಲಾಯ ತವದಾನೇನ ಪ್ರೀಯತಾಂ ಮೇ ಸದಾ ಯಮಃ ॥**

ಅನಂತರ ಋತ್ವಿಜರನ್ನು ಪೂಜಿಸಬೇಕು.

ಋತ್ವಿಜರು ಆಚಾರ್ಯನ ಜೊತೆಗೆ ಶಾಂತಿಮಂತ್ರಗಳನ್ನು ಪಠಿಸುತ್ತಾ ಕಲಶಾಭಿಷೇಕವನ್ನು ಸಕುಟುಂಬರಾದ ದಂಪತಿಗಳಿಗೆ ಮತ್ತು ಶಿಶುವಿಗೆ ನಡೆಸಬೇಕು. ಅನಂತರ ಪ್ರತಿಮೆಯನ್ನು ಆಚಾರ್ಯನಿಗೆ ದಾನ ಮಾಡಬೇಕು.

**ದಾನಮಂತ್ರ : ಯಮೋಽಸಿ ಪುಣ್ಯಮೂರ್ತಿರ್ನಿರಾಮಯ ।**
**ದಾನೇನ ತವ ದೇವೇಶ ವಿಘ್ನಾ ನಶ್ಯಂತು ಮೇ ಸದಾ ॥**

ಅನಂತರ ಯಥಾಶಕ್ತಿ ಬ್ರಾಹ್ಮಣರಿಗೆ ಅನ್ನದಾನಮಾಡಿ ಆಶೀರ್ವಾದ ಪಡೆಯಬೇಕು.



## ದಿನಕ್ಷಯ ದುಷ್ಟಯೋಗಾದಿ ಶಾಂತಿಃ

ಹಿಂದೆ ಹೇಳಿದ ದೋಷಗಳನ್ನು ಬಿಟ್ಟು ಉಳಿದ ಅನೇಕ ದೋಷಗಳನ್ನು ಸಂಗ್ರಹವಾಗಿ ತಿಳಿಸಿ ಇಲ್ಲಿ ಶಾಂತಿಯನ್ನು ನಡೆಸಬೇಕೆಂದು ತಿಳಿಸಿದ್ದಾರೆ.

ಈ ದೋಷಗಳಿದ್ದಾಗ ನವಗ್ರಹ ಹೋಮವನ್ನು ನಡೆಸಿ ಇಲ್ಲಿ ಹೇಳಿದ ಕ್ರಮವನ್ನು ನಡೆಸುವುದು.

೧. ದಿನಕ್ಷಯ = (ಮೂರು ತಿಥಿಗಳಿರುವ ಅಂದರೆ ಉಪರಿತಿಥಿ ಬಂದಿರುವ ದಿನ.

| | |
|---|---|
| ೨. ವ್ಯತೀಪಾತ = ಯೋಗ | ೩. ವ್ಯಾಘಾತ = ಯೋಗ |
| ೪. ವಿಷ್ಟಿ = ಭದ್ರಾಕರಣ | ೫. ವೈಧೃತಿ = ಯೋಗ |
| ೬. ಶೂಲ = ಯೋಗ | ೭. ಗಂಡ = ಯೋಗ |
| ೮. ಪರಿಘ = ಯೋಗ | ೯. ವಜ್ರ = ಯೋಗ |

೧೦. ಯಮಘಂಟಕ = ಮಖಾ–ವಿಶಾಖಾ–ಆರ್ದ್ರಾ–ಮೂಲ–ಕೃತ್ತಿಕಾ–ರೋಹಿಣಿ–ಹಸ್ತ ಇವು ರವಿವಾರದಿಂದ ಕ್ರಮವಾಗಿ ಏಳು ವಾರಗಳಲ್ಲಿ ಬಂದರೆ.

೧೧. ಕಾಲಗಂಡ = ರವಿವಾರದಂದು ಭರಣಿನಕ್ಷತ್ರ

೧೨. ಮೃತ್ಯುಯೋಗ = ಅನುರಾಧಾ, ಉತ್ತರಾಷಾಢ, ಶತಭಿಷಾ, ಅಶ್ವಿನಿ, ಮೃಗಶಿರ, ಆಶ್ಲೇಷಾ, ಹಸ್ತ ಇವು ಸೂರ್ಯಾದಿ ವಾರಗಳಲ್ಲಿ ಬಂದರೆ.

೧೩. ದಗ್ಧಯೋಗ = ದ್ವಾದಶೀ, ಏಕಾದಶಿ, ಪಂಚಮಿ, ದ್ವಿತೀಯಾ, ಷಷ್ಠೀ, ಅಷ್ಟಮೀ, ನವಮೀ ತಿಥಿಗಳು ಕ್ರಮವಾಗಿ ಸೂರ್ಯಾದಿ ವಾರದಲ್ಲಿ ಬಂದರೆ.

ಇಲ್ಲಿ ತಿಳಿಸಿದ ದುಷ್ಟದಿನಗಳ ಜೊತೆ ಹಿಂದೆ ತಿಳಿಸಿದ ಮೂಲ–ಅಮಾವಾಸ್ಯಾದಿ ದೋಷಗಳು ಇದ್ದರೆ ಅಥವಾ ಇವುಗಳಲ್ಲೇ ಎರಡು ಮೂರು ದೋಷಗಳು ಸೇರಿದ್ದರೆ ತುಂಬಾ ಅನಿಷ್ಟವಿದೆ. ಆಗ ಹೋಮಾದಿಗಳಲ್ಲಿ ಆಹುತಿ ಸಂಖ್ಯೆಯನ್ನು ಅಧಿಕಗೊಳಿಸಬೇಕು. ಅಥವಾ ಮುಂದೆ ಹೇಳಲಿರುವ ವಿಧಾನಗಳಲ್ಲಿ ಒಂದಕ್ಕಿಂತ ಹೆಚ್ಚು ವಿಧಾನಗಳನ್ನು ನಡೆಸಬೇಕೆಂದು ಋಷಿಗಳ ಅಭಿಪ್ರಾಯವಿದೆ.

೧. ಶಿವಾಲಯದಲ್ಲಿ ತುಪ್ಪದ ದೀಪ ಸಮರ್ಪಣೆ.

೨. ರುದ್ರಾಭಿಷೇಕ

೩. ಅಶ್ವತ್ಥಪ್ರದಕ್ಷಿಣೆ

೪. ಆಯುಷ್ಯ ವೃದ್ಧಿಗೆ ಹೇಳಿದ ಧನ್ವಂತರಿ ಮೃತ್ಯುಂಜಯಾದಿ ಮಂತ್ರಜಪ

೫. ಗುರುಪೂಜೆ (ಸ್ವಾಮಿಗಳಿಗೆ ಭಿಕ್ಷೆ ನೀಡುವುದು)

೬. ದೇವಪೂಜೆ

೭. ಬ್ರಾಹ್ಮಣಪೂಜೆ (ಅನ್ನದಾನ)

೮. ರುದ್ರದೇವರ ಸನ್ನಿಧಿಯಲ್ಲಿ ಪೂರ್ಣ ಒಂದು ತಿಂಗಳು ಅಖಂಡ ತುಪ್ಪದ ದೀಪ ಸಮರ್ಪಣೆ.

೯. ವಿಷ್ಣುದೇವಸ್ಥಾನದಲ್ಲಿ ಅಥವಾ ಅಶ್ವತ್ಥವೃಕ್ಷಕ್ಕೆ ೧೦೮ ಪ್ರದಕ್ಷಿಣೆ+ನಮಸ್ಕಾರ.

೧೦. ಗಣಪತಿಸೂಕ್ತ (ಋ. ೮–೮೧–೧.....೯) ಪುರುಷಸೂಕ್ತ (ಋ. ೧೦–೯೦–೧....೧೬) ಸೌರಮಂತ್ರಗಳು (ಸಂಕ್ರಾಂತಿ ಶಾಂತಿಯಲ್ಲಿ ತಿಳಿಸಿದೆ) ಮೃತ್ಯುಂಜಯಮಂತ್ರ ಇವುಗಳನ್ನು ಜಪಿಸಿ ಕೊನೆಗೆ ಶಾಂತಿಮಂತ್ರಗಳನ್ನು ಜಪಿಸುವುದು.

⏭ ⏮

**ಪರಿಶಿಷ್ಟ – ೧**

# ಸದಾಚಾರ ಸಂಗ್ರಹ

(ರಾಜಪುರೋಹಿತ ವೇದಮೂರ್ತಿ ಮಾಧವ ಉಪಾಧ್ಯಾಯರು, ಚೆನ್ನೈ)

**ಹೇರಂಬ ಕುಂಭಲಸಿತಾಮರಕುಂಕುಮಾಂಕ ಮಾರಾರಿಪುತ್ರ ಕರಿವಕ್ತ್ರ ಪವಿತ್ರಗಾತ್ರ ।**
**ಕಾರುಣ್ಯರೂಪ ಸುಕಲಾಪ ಮಹಾಪ್ರತಾಪ ಪ್ರಾರಬ್ಧಕಾರ್ಯಮುರುಧೈರ್ಯ ಭವೇದವಿಘ್ನಮ್ ॥**

**ಯಸ್ಮಿನ್ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಯಾತಿ ಪರಂ ಜಯತಿ ಸೋಽಚ್ಯುತಃ ॥**

**ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।**
**ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಮ್ ॥**

**ಶ್ರೀಶುಭಮಸ್ತು**

**ವೇದೋಕ್ತಃ ಪ್ರಥಮೋ ಧರ್ಮೋ ಧರ್ಮಶಾಸ್ತ್ರೇಣ ಚಾಪರಃ ।**
**ಶಿಷ್ಟಾಚಾರಸ್ತೃತೀ ಯಸ್ತು ತ್ರಿವಿಧಂ ಧರ್ಮಲಕ್ಷಣಮ್ ॥**

ವೇದೋಕ್ತವಾದ ಧರ್ಮ ಮೊದಲನೆಯದ್ದಾದರೆ ಧರ್ಮಶಾಸ್ತ್ರೋಕ್ತ(ಸ್ಮೃತ್ಯುಕ್ತ) ಧರ್ಮ ಎರಡನೆಯದು. ಮೂರನೆಯದು ಶಿಷ್ಟಾಚಾರ.

**'ಶ್ರುತಿಸ್ಮೃತ್ಯವಿರೋಧೇನ ಸದಾಚಾರಃ ಸ ಉಚ್ಯತೇ'**

ಈ ಶಿಷ್ಟಾಚಾರವೂ ಶ್ರುತಿ-ಸ್ಮೃತಿಗಳಿಗೆ ಅವಿರೋಧವಾಗಿರಬೇಕು. ಮಾತ್ರವಲ್ಲದೆ ದೇಶ, ಕಾಲ, ಪಾತ್ರಾನುಸಾರವಾಗಿ ನಡೆಯತಕ್ಕದ್ದು.

## ೧. ದೇಶ

ಬದರಿಯಲ್ಲಿ ಪೂಜೆಮಾಡುವವರು ಅಂಗಿ, ಟೊಪ್ಪಿ ಹಾಕಿಕೊಂಡು ಪೂಜೆ ಮಾಡುವುದು ಅಲ್ಲಿಯ ಆಚಾರ. ಇದಕ್ಕೆ ಕಾರಣ ಆ ದೇಶದಲ್ಲಿ ಯಾವಾಗಲೂ ವಿಪರೀತ ಚಳಿ. ಅಲ್ಲಿ ೬ ತಿಂಗಳು ಪೂಜೆ. ಈ ೬ ತಿಂಗಳುಗಳಲ್ಲಿ ಪೂಜೆ ಮಾಡುವವರು ದಕ್ಷಿಣದೇಶದಂತೆ ಬರೇ ವಸ್ತ್ರದಲ್ಲಿದ್ದು ಪೂಜೆ ಮಾಡಿದರೆ ಅಲ್ಲಿಯ ಹವಾಮಾನದಿಂದಾಗಿ ಬದುಕುವಂತಿಲ್ಲ. 'ಶರೀರಮಾದ್ಯಂ ಖಲು ಧರ್ಮಸಾಧನಂ' ಶರೀರವನ್ನು ಕಾಪಾಡಲಿಕ್ಕಾಗಿ ಅಲ್ಲಿಯ ವಾತಾವರಣಕ್ಕನುಗುಣವಾಗಿ ಕೋಟು, ಟೊಪ್ಪಿ ಹಾಕಿಕೊಂಡೇ ಪೂಜೆ ಮಾಡುತ್ತಾರೆ. ಈ ಶಿಷ್ಟಾಚಾರ ಆ ದೇಶಕ್ಕೆ ಮಾತ್ರ ಹೇಳಿದ್ದು.

## ೨. ಕಾಲ

ಸೂರ್ಯ-ಚಂದ್ರಗ್ರಹಣ ಕಾಲದಲ್ಲಿ ಸ್ನಾನ, ಜಪ, ಹೋಮ, ಪೂಜೆ, ಪಿತೃಶ್ರಾದ್ಧ ಅಥವಾ ತರ್ಪಣ, ದಾನ ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿದೆ. ಪುಣ್ಯಕಾಲವು ೨-೩ ಗಂಟೆ ಹೊತ್ತು ಇದ್ದಾಗ ಮೇಲೆ ಹೇಳಿದ್ದನ್ನೆಲ್ಲಾ ಮಾಡಬಹುದು. ಈ ಪುಣ್ಯಕಾಲವು ೧ ಘಳಿಗೆ, ಅರ್ಧ ಘಳಿಗೆಯೂ ಇರುವುದುಂಟು. ಆ ಸಂದರ್ಭದಲ್ಲಿ ಮೇಲೆ ತಿಳಿಸಿರುವ ಕರ್ಮಗಳನ್ನು ಕ್ರಮಪ್ರಕಾರ ಮಾಡಲು ಪ್ರಾರಂಭ ಮಾಡಿದರೆ 'ಪುಣ್ಯಕಾಲವು ಸಂಕಲ್ಪದಲ್ಲೇ ಹೋಯಿತು' ಎಂಬಂತೆ ಆದೀತು. ಈ ಸಂದರ್ಭದಲ್ಲಿ ಗ್ರಹಣಕಾಲದಲ್ಲಿ ಯಾವುದನ್ನು ಮಾಡದಿದ್ದರೆ ಪ್ರತ್ಯವಾಯವು

ಬರುತ್ತದೋ ಅದನ್ನು ಪುಣ್ಯಕಾಲ ಮುಗಿಯುವುದರೊಳಗೆ ಸ್ವಲ್ಪ ಸ್ವಲ್ಪ ಮಾತ್ರ ಮಾಡಿ ಮುಗಿಸಬೇಕು. ಇದು ಕಾಲಕ್ಕೆ ಅನುಗುಣವಾಗಿ ಮಾಡುವ ಶಿಷ್ಟಾಚಾರ.

### ೩. ಪಾತ್ರ

ಸಣ್ಣ ಹುಡುಗನೋ, ರೋಗಿಯೋ, ಹಣ್ಣು ಮುದುಕನೋ ಯಜಮಾನನಾಗಿರುವಾಗ ಅವರ ಶಕ್ತಿಗನುಗುಣವಾಗಿ ಕರ್ಮ ಮಾಡಿಸತಕ್ಕದ್ದು. ಹೇಗೆಂದರೆ, ಸಣ್ಣ ಹುಡುಗನಿಗೂ, ರೋಗಿಗೂ, ಹಣ್ಣು ಮುದುಕನಿಗೂ ಅವರ ತಂದೆತಾಯಿಯವರ ಶ್ರಾದ್ಧದಿವಸ ಉಪವಾಸ ಇದ್ದು ಮಾಡಲಿಕ್ಕೆ ಸಾಧ್ಯವೇ ಇಲ್ಲ. ಧರ್ಮಶಾಸ್ತ್ರಗಳಲ್ಲಿ ಯಾವುದೇ ನಿಯಮಗಳನ್ನು ಹೇಳುವಾಗಲೂ 'ಬಾಲವೃದ್ಧಾತುರಾನ್ ವಿನಾ' ಎಂದೇ ಹೇಳಿದೆ. ಈ ಸಂದರ್ಭದಲ್ಲಿ ಪಾನೀಯವನ್ನು ತೆಗೆದುಕೊಂಡು ಮಾಡಲೇಬಾರದು ಎಂದು ಹೇಳಿದರೆ, ಕರ್ಮದ ಸರ್ವನಾಶ. 'ಸರ್ವನಾಶೇ ಸಮುತ್ಪನ್ನೇ ಹ್ಯರ್ಧಂ ತ್ಯಜತಿ ಪಂಡಿತಃ' ಎಂಬ ನ್ಯಾಯದಂತೆ ಮಾಡದೇ ಇರುವುದು ಸರ್ವನಾಶ. ಹಾಲು ತೆಗೆದುಕೊಂಡು ಪುನಃ ಸ್ನಾನಮಾಡಿ ಕರ್ಮ ಮಾಡಿದಾಗ ಸ್ವಲ್ಪ ಲೋಪವಾದರೂ ಕರ್ಮ ಮಾಡಿದಂತಾಗುತ್ತದೆ. ಶಾಸ್ತ್ರದಲ್ಲಿ–

**ಇಕ್ಷೂನಾಪಃ ಫಲಂ ಮೂಲಂ ತಾಂಬೂಲಂ ಪಯ ಔಷಧಮ್ ।**
**ಭಕ್ಷಯಿತ್ವಾ ತು ಕರ್ತವ್ಯಾಃ ಸ್ನಾನದಾನಾದಿಕಾಃ ಕ್ರಿಯಾಃ ॥**

ಇಷ್ಟು ಪದಾರ್ಥಗಳಲ್ಲಿ ಯಾವುದನ್ನಾದರೂ 'ಭಕ್ಷಯಿತ್ವೈವ' –ತಿಂದೇ ಮಾಡಬೇಕೆಂದು ಹೇಳಲಿಲ್ಲ. 'ಭಕ್ಷಯಿತ್ವಾಪಿ' ತಿಂದಾದರೂ ಮಾಡು ಎಂದೇ ಹೇಳಿದ್ದರಿಂದ ಅಶಕ್ತರು ಮೇಲೆ ಹೇಳಿರುವ ಪದಾರ್ಥಗಳಲ್ಲಿ ಯಾವುದನ್ನಾದರೂ ತಿಂದಾದರೂ ಕರ್ಮ ಮಾಡಬೇಕೆಂಬುದೇ ತಾತ್ಪರ್ಯ.

### ತ್ರಿವಿಧ ಕರ್ಮಗಳು

**ನಿತ್ಯಂ ನೈಮಿತ್ತಿಕಂ ಕಾಮ್ಯಂ ತ್ರಿವಿಧಂ ಕರ್ಮ ಕಥ್ಯತೇ ।** –ಸ್ಮೃತಿ

ಕರ್ಮಗಳನ್ನು ನಿತ್ಯ, ನೈಮಿತ್ತಿಕ ಹಾಗೂ ಕಾಮ್ಯ ಎಂದು ಮೂರು ವಿಧ. ಸ್ನಾನ, ಸಂಧ್ಯಾವಂದನೆ, ಜಪ, ದೇವರ ಪೂಜೆ, ಪಂಚಯಜ್ಞ, ಪ್ರತಿಸಾಂವತ್ಸರಿಕಶ್ರಾದ್ಧ ಗಳೇ ಮೊದಲಾದದ್ದು **ನಿತ್ಯಕರ್ಮ**. ದುರ್ಭಿಕ್ಷಾದಿ ಪೀಡಾಪರಿಹಾರಕ್ಕಾಗಿ ಮಾಡುವ ಯಜ್ಞಾದಿಗಳು, ತೀರ್ಥಶ್ರಾದ್ಧ–ಗ್ರಹಣಶ್ರಾದ್ಧ–ಮಾತಾಪಿತೃಗಳ ಅಂತ್ಯೇಷ್ಟಿಕರ್ಮಗಳು, **ನೈಮಿತ್ತಿಕಕರ್ಮಗಳು**, ಸಂತತಿ, ಸಂಪತ್ತು, ಗ್ರಹಚಾರಪರಿಹಾರಕ್ಕಾಗಿ ತಮ್ಮ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಮಾಡುವ ಯಜ್ಞ, ಪೂಜಾದಿಗಳು, ಮಹಾಲಯಶ್ರಾದ್ಧವು **ಕಾಮ್ಯಕರ್ಮ**.

### ಶೌಚಾಚಾರ

**ಉಪನೀಯ ಗುರುಃ ಶಿಷ್ಯಂ ಶಿಕ್ಷಯೇಚ್ಛೌಚಮಾದಿತಃ ।**
**ಆಚಾರಮಗ್ನಿಕಾರ್ಯಂ ಚ ಸಂಧ್ಯೋಪಾಸನಮೇವ ಚ ॥** –ಮನುಸ್ಮೃತಿ

ಗುರುಶಿಷ್ಯನಿಗೆ ಉಪನಯನ ಮಾಡಿ, ಸದಾಚಾರಗಳು, ಅಗ್ನಿಕಾರ್ಯ, ಸಂಧ್ಯಾವಂದನೆಗಳನ್ನು ಹೇಳಿಕೊಡಬೇಕು.

ಉಪನಯನದ ಅನಂತರ ಗುರುಗಳು ಶಿಷ್ಯನಿಗೆ ಉಪದೇಶ ಹೀಗೆ ಮಾಡಬೇಕು–

**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಹರಿಂ ಧ್ಯಾಯೇದತಂದ್ರಿತಃ ।**

ಬೆಳಗ್ಗೆ ೪ ಗಂಟೆಯ ಬ್ರಾಹ್ಮಮುಹೂರ್ತದಲ್ಲಿ ನಿದ್ದೆಯಿಂದ ಎಚ್ಚತ್ತು ಹರಿಸ್ಮರಣೆ ಮಾಡಿ ಮಂಗಲಾಷ್ಟಕ, ಪ್ರಾತಃಸ್ತೋತ್ರ, ದಧಿವಾಮನಸ್ತೋತ್ರ, ನವಗ್ರಹಸ್ತೋತ್ರ ಮೊದಲಾದವುಗಳನ್ನು ಹೇಳಬೇಕು.

**ಸ್ಮೃತ್ವಾ ವಿಷ್ಣುಂ ಸಮುತ್ಥಾಯ ಕೃತಶೌಚೋ ಯಥಾವಿಧಿ ।**
**ಧೌತದಂತಃ ಸಮಾಚಮ್ಯ ಸ್ನಾನಂ ಕುರ್ಯಾದ್ವಿಧಾನತಃ ॥** –ಸ.ಸ್ಮೃ

ನಿದ್ದೆಯಿಂದ ಎಚ್ಚೆತ್ತು ಹರಿಸ್ಮರಣೆ ಮಾಡಿ ಶೌಚ–ದಂತಧಾವನಗಳನ್ನು ಮಾಡಿ ಶ್ರೋತ್ರಾಚಮನ ಮಾಡಿಕೊಂಡು ವಿಷ್ಣುವೈಷ್ಣವದೇವತಾ ಪುಣ್ಯನದೀತೀರ್ಥಕ್ಷೇತ್ರಾದಿ ಗಳನ್ನು ಸ್ಮರಿಸಬೇಕು. ಮೊದಲು–

**ಪ್ರಾತಃ ಕಾಲಾದಿಕಂ ಕರ್ಮ ನಿತ್ಯಂ ನೈಮಿತ್ತಿಕಂ ತಥಾ ।**
**ಕೇಶವಾರಾಧನಾರ್ಥಾಯ ಕರಿಷ್ಯೇಽಹಂ ತದಾಜ್ಞಯಾ ॥**

**'ಸಂಕಲ್ಪಃ ಕರ್ಮಮಾನಸಂ'** ಎಂದು ಮನಃಸಂಕಲ್ಪ ಮಾಡಿ ಶೌಚಾಚಾರಕ್ಕೆ ತೊಡಗಬೇಕು.

ಶಾಸ್ತ್ರದಲ್ಲಿ ಹೇಳಿದಂತೆ ಮಲೋತ್ಸರ್ಗ ಮಾಡಿ ಮೃತ್ತಿಕಾಶೌಚ, ಜಲಶೌಚಗಳನ್ನು ಮಾಡಿ ವಿಧಿಪ್ರಕಾರ ಹಲ್ಲುಜ್ಜಬೇಕು.

**ಶೌಚಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಭ್ಯಂತರಂ ತಥಾ ।**
**ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಭಾವಶುದ್ಧಿಸ್ತಥಾಂತರಮ್ ॥**

ಮೃತ್ತಿಕೆ ನೀರುಗಳಿಂದ ಮಾಡುವುದು **ಬಹಿಃಶೌಚ**. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಷಡ್ವೈರಿಗಳನ್ನು ನಿಗ್ರಹಿಸಿ ಮನಃಶುದ್ಧಿ ಮಾಡಿಕೊಳ್ಳುವುದು **ಆಂತರಶೌಚ**. ಇವುಗಳನ್ನು ಮಾಡಿಕೊಂಡು ಪೂರ್ವ ಅಥವಾ ಉತ್ತರಮುಖವಾಗಿ ಕುಳಿತುಕೊಂಡು, ಎರಡು ಸಲ ಸ್ಮಾರ್ತಾಚಮನ ಮಾಡಿ, ತುಳಸಿಗೆ ನೀರು ಹಾಕಿ ಮೃತ್ತಿಕಾಧಾರಣ ಮಾಡಿ, ಪ್ರದಕ್ಷಿಣನಮಸ್ಕಾರ ಮಾಡಿ, ದೇವರಿಗೂ–ಗೋವಿಗೂ–ಗುರುಹಿರಿಯರಿಗೂ ನಮಸ್ಕಾರ ಮಾಡಬೇಕು.

**ಆಚಮನಪ್ರಕಾರ:**

ಆಚಮನೆಯು **ಉದಕಾಚಮನ, ಶ್ರೋತ್ರಾಚಮನ** ಎಂದು ಎರಡು ವಿಧ. ಇದರಲ್ಲಿಯೂ ಶ್ರೌತಾಚಮನ ಎಂದು ಎರಡು ವಿಧ.

ಋಗ್ವೇದಾಯ ಸ್ವಾಹಾ, ಯಜುರ್ವೇದಾಯ ಸ್ವಾಹಾ, ಸಾಮವೇದಾಯ ಸ್ವಾಹಾ ಎಂದು ಮೂರು ಸಲ ನೀರು ಕುಡಿದು ಅಗ್ನಯೇ ನಮಃ ಇತ್ಯಾದಿ ನಾಮಗಳಿಂದ ಅಂಗಸ್ಪರ್ಶ ಮಾಡುವುದು **ಶ್ರೌತಾಚಮನ**. ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹಾ, ಮಾಧವಾಯ ಸ್ವಾಹಾ ಎಂದು ಮೂರುಸಲ ನೀರು ಕುಡಿದು ಗೋವಿಂದಾಯ ನಮಃ ಇತ್ಯಾದಿ ನಾಮಗಳಿಂದ ಅಂಗಸ್ಪರ್ಶ ಮಾಡುವುದು **ಸ್ಮಾರ್ತಾಚಮನ**.

**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।**
**ವಿಪ್ರಸ್ಯ ದಕ್ಷಿಣೇ ಕರ್ಣೇ ಸಂತೀತಿ ಮನುರಬ್ರವೀತ್ ॥** –ಮ.ಸ್ಮೃ.

'ವೇದಾಭ್ಯಾಸೇನ ವಿಪ್ರತ್ವಂ' ವೇದಜ್ಞನಾದ ಬ್ರಾಹ್ಮಣನ ಬಲಗಿವಿಯಲ್ಲಿ ಪುಷ್ಕ ರಾದಿ ಸಕಲತೀರ್ಥಾಭಿಮಾನಿ–ದೇವತೆಗಳೂ, ಗಂಗಾದಿ ಸಕಲನದ್ಯಭಿಮಾನಿದೇವತೆಗಳೂ ಯಾವಾಗಲೂ ಸನ್ನಿಹಿತರಾಗಿರುವುದರಿಂದ ಈ ದೇವತೆಗಳನ್ನೆಲ್ಲಾ ಸ್ಮರಿಸಿ, 'ಪುಂಡರೀಕಾಕ್ಷಯ ನಮಃ' ಎಂದು ಹೇಳಿ, ಬಲಗೈಯನ್ನು ಮುಟ್ಟುವುದು ಶ್ರೋತ್ರಾಚಮನ.

ಈ ಆಚಮನವನ್ನು,

**ದ್ವಿರಾಚಮೇತ್ತು ಸರ್ವತ್ರ ವಿಣ್ಮೂತ್ರೋತ್ಸರ್ಜನೇ ತ್ರಯಮ್ ।**
**ಭೋಜನಾಂತೇ ಚತುರ್ವಾರಂ ಸಂಗಮಾಂತೇ ತು ಪಂಚಮಮ್ ॥** –ಸ್ಮೃತಿ

ಸಾಮಾನ್ಯ ಆಚಮನ ಹೇಳಿದಲ್ಲಿ ಎರಡಾವರ್ತಿಯೂ, ಮಲಮೂತ್ರ ಉತ್ಸರ್ಜನದ ಅನಂತರ ಮೃತ್ತಿಕಾಶೌಚ, ೮ ಸಲ ಬಾಯಿ ಮುಕ್ಕಳಿಸಿ ಕೈಕಾಲು ತೊಳೆದುಕೊಂಡು 'ಪ್ರಾಙ್ಮುಖೋದಙ್ಮುಖೋ ವಾ ಉಪವಿಶ್ಯೈವ ಆಚಮನಂ ಕಾರ್ಯಂ' –ಪೂರ್ವ ಅಥವಾ ಉತ್ತರ ಮುಖವಾಗಿ ಕುಳಿತುಕೊಂಡೇ ೩ ಸಲ ಆಚಮನ ಮಾಡಬೇಕು. ಭೋಜನಾನಂತರ ೧೨ ಸಲ ಬಾಯಿಮುಕ್ಕಳಿಸಿ ಕೈಕಾಲು ತೊಳೆದುಕೊಂಡು, ಕುಳಿತುಕೊಂಡು ೪ ಸಲ ಆಚಮನ ಮಾಡಬೇಕು. ಗೃಹಸ್ಥಾಶ್ರಮಿಯು ಶಾಸ್ತ್ರೋಕ್ತಕಾಲದಲ್ಲಿ ಸ್ತ್ರೀಸಂಗದ ಅನಂತರ ಕೈಕಾಲು ತೊಳೆದುಕೊಂಡು ೧೬ ಸಲ ಬಾಯಿ ಮುಕ್ಕಳಿಸಿ ಕುಳಿತುಕೊಂಡು ೫ ಸಲ ಆಚಮನ ಮಾಡಬೇಕು ಅಥವಾ ಶ್ರೋತ್ರಾಚಮನ ಮಾಡಬೇಕು.

**ಚಂಡಾಲಾದೀನ್ ಜಪೇ ಹೋಮೇ ದೃಷ್ಟ್ವಾಽಽಚಾಮೇದ್ದ್ವಿಜೋತ್ತಮಃ ।**
**ಶ್ವಾದೀನ್ ದೃಷ್ಟ್ವಾ ತಥೈವಾಽಪಿ ಕರ್ಣಂ ವಾ ದಕ್ಷಿಣಂ ಸ್ಪೃಶೇತ್ ॥** –ಸ್ಮೃ.ರ.

ಬ್ರಾಹ್ಮಣನು ಜಪ, ಪೂಜೆ, ಹೋಮ, ಶ್ರಾದ್ಧಕಾಲಗಳಲ್ಲಿ ಚಂಡಾಲಾದಿಗಳನ್ನು, ನಾಯಿ, ಕಾಗೆ, ಕತ್ತೆ, ಹಂದಿ ಇತ್ಯಾದಿಗಳನ್ನು ನೋಡಿದರೆ ಕೂಡಲೇ ಆಚಮನ ಮಾಡಬೇಕು. ಅಥವಾ 'ಪುಂಡರೀಕಾಕ್ಷಯ ನಮಃ' ಎಂದು ಹೇಳಿ ಬಲಕೈಯಲ್ಲಿ ಬಲಕಿವಿಯನ್ನಾದರೂ ಮುಟ್ಟಬೇಕು.

**ಯಃ ಕ್ರಿಯಾ ಕ್ರಿಯತೇ ಮೋಹದನಾಚಮ್ಯೈವ ನಾಸ್ತಿಕಃ ।**
**ಭವಂತಿ ಹಿ ವೃಥಾ ತಸ್ಯ ಕ್ರಿಯಾಃ ಸರ್ವಾ ನ ಸಂಶಯಃ ॥** –ವಾಯುಪುರಾಣ

ಯಾವ ನಾಸ್ತಿಕನು ಆಲಸ್ಯದಿಂದ ಆಚಮನ ಮಾಡದೆ ಕರ್ಮಾಚರಣೆ ಮಾಡುತ್ತಾನೋ ಅವನ ಎಲ್ಲ ಕರ್ಮಗಳೂ ನಿಷ್ಫಲವಾಗುತ್ತವೆ. ಇದರಲ್ಲಿ ಯಾವ ಸಂಶಯವೂ ಇಲ್ಲ.

**ಮೃತ್ತಿಕಾಶೌಚ:**

**ದ್ವೇ ಲಿಂಗೇ ಮೃತ್ತಿಕೇ ದೇಯೇ ಪಂಚಾಪಾನೇ ಕರೇ ದಶ ।**
**ಪಾದಯೋಃ ಸಪ್ತ ದಾತವ್ಯಾ ಮೃದಃ ಶುದ್ಧಿಮಭೀಪ್ಸದಾ ॥**
**ಯಾವತ್ತು ಶುದ್ಧಿಮನ್ವೇತ ತಾವಚ್ಛೌಚಂ ಸಮಾಚರೇತ್ ॥** –ವಸಿಷ್ಠಸ್ಮೃತಿ

ಲಿಂಗಕ್ಕೆ ೨ ಸಲ, ಗುದಕ್ಕೆ ೫ ಸಲ, ಕೈಗಳಿಗೆ ೧೦ ಸಲ, ಕಾಲುಗಳಿಗೆ ೭ ಸಲ ಮೃತ್ತಿಕೆ ಹಾಕಿ ತೊಳೆಯಬೇಕು. ಇಷ್ಟರಲ್ಲಿಯೂ ದುರ್ಗಂಧ ಹೋಗದಿದ್ದರೆ ಅದು ಹೋಗುವ ತನಕ ಹಾಕಿ ತೊಳೆಯಬೇಕು.

**ಗಂಡೂಷ:**

**ಚತ್ವಾರ್ಯಷ್ಟ ದ್ವಿಷಟ್ ದ್ವ್ಯಷ್ಟ ಗಂಡೂಷಾಸ್ತು ಸಮೀರಿತಾಃ ।**
**ಮೂತ್ರೇ ಪುರೀಷೇ ಭುಕ್ತ್ಯಂತೇ ಸಂಗಮಾಂತೇ ಯಥಾಕ್ರಮಮ್ ॥** –ಸ್ಮೃ.ರ.

ಮೂತ್ರ ಮಾಡಿದ ಅನಂತರ ೪ ಸಲ, ಮಲವಿಸರ್ಜನೆಯ ಅನಂತರ ೮ ಸಲ, ಭೋಜನಾನಂತರ ೧೨ ಸಲ, ಗೃಹಸ್ಥಾಶ್ರಮಿಯು ಸ್ತ್ರೀಸಂಗದ ಅನಂತರ ೧೬ ಸಲ ಬಾಯಿ ಮುಕ್ಕಳಿಸಬೇಕು. ಈ ಶೌಚಗಳನ್ನು ಮಾಡುವಾಗ,

**ಸ್ವದಕ್ಷಿಣಶ್ರುತಿನ್ಯಸ್ತಬ್ರಹ್ಮಸೂತ್ರಃ ಸಮಾಹಿತಃ ।**
**ಉದಙ್ಮುಖೋ ದಿವಾ, ನಕ್ತಂ ದಕ್ಷಿಣಾಮುಖಸಂಸ್ಥಿತಃ ॥** –ಸ್ಮೃ.ರ.

ಮಲಮೂತ್ರ ವಿಸರ್ಜನೆ ಮಾಡುವಾಗ ತನ್ನ ಬಲಕಿವಿಗೆ ಮಾಲಾಕಾರ ಮಾಡಿದ ಉಪವೀತವನ್ನು ಸಿಕ್ಕಿಸಿ,

ಹಗಲಲ್ಲಿ ಉತ್ತರಾಭಿಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖವಾಗಿಯೂ ಮೌನಿಯಾಗಿ ಕುಳಿತುಕೊಂಡು ಮಾಡಬೇಕು.

**ಏತಚ್ಛೌಚಂ ಗೃಹಸ್ಥಾನಾಂ ದ್ವಿಗುಣಂ ಬ್ರಹ್ಮಚಾರಿಣಾಮ್ ।**
**ತ್ರಿಗುಣಂ ತು ವನಸ್ಥಾನಾಂ ಯತೀನಾಂ ತು ಚತುರ್ಗುಣಮ್ ॥**

**ಯದ್ದಿವಾ ವಿಹಿತಂ ಶೌಚಂ ತದರ್ಧಂ ನಿಶಿ ಕೀರ್ತಿತಮ್ ।**
**ತದರ್ಧಮಾತುರೇ ಪ್ರೋಕ್ತಮಾತುರಸ್ಯಾರ್ಧಮಧ್ವನಿ ॥** -ಮ.ಸ್ಮೃ

ಈ ಪೂರ್ವದಲ್ಲಿ ಹೇಳಿದ ಶೌಚವಿಧಿ ಗೃಹಸ್ಥಾಶ್ರಮಿಗಳಿಗೆ. ಅವರಿಗೆ ಹೇಳಿದ ೨ ಪಾಲು ಜಾಸ್ತಿ ಬ್ರಹ್ಮಚಾರಿಗಳಿಗೆ. ೩ ಪಾಲು ವಾನಪ್ರಸ್ಥರಿಗೂ, ೪ ಪಾಲು ಯತಿಗಳಿಗೂ ಹೇಳಿದೆ. ಈ ಶೌಚಾಚರಣೆಯನ್ನು ಹಗಲಲ್ಲಿ ಪೂರ್ತಿ ಮಾಡಬೇಕು. ರಾತ್ರಿಯಲ್ಲಾದರೆ ಅದರ ಅರ್ಧ, ರೋಗಿಗೆ ಅದರ ಅರ್ಧ, ಪ್ರಯಾಣಕಾಲದಲ್ಲಿ (ಮಧ್ಯಮಾರ್ಗದಲ್ಲಿ) ಅದರ ಅರ್ಧ ಮಾಡಿದರೆ ಸಾಕು.

**ಯಾವದೇವೋಪನೀಯಂತೇ ದ್ವಿಜಾಃ ಶೂದ್ರಾಸ್ತಥಾಽಂಗನಾಃ ।**
**ಗಂಧಲೇಪಕ್ಷಯಕರಂ ಶೌಚಮೇಷಾಂ ವಿಧೀಯತೇ ॥**
**ಯೋಷಿತಾಮುಕ್ತಶೌಚಾರ್ಧಂ ಶೂದ್ರಾಣಾಮಪ್ಯುದೀರಿತಮ್ ॥** -ಸ್ಮೃ

ಉಪನಯನ ಆಗದ ಬ್ರಾಹ್ಮಣಕುಮಾರನೂ, ಸ್ತ್ರೀಯರೂ, ದುರ್ಗಂಧ ಹೋಗುವವರೆಗೆ ಮೃತ್ತಿಕಾಶೌಚ ಮಾಡಬೇಕೆಂದಿದೆ. ಸ್ತ್ರೀಯರಿಗೆ ಹೇಳಿದ ಅರ್ಧದಷ್ಟು ಶೂದ್ರರು ಮಾಡಬೇಕು.

**ಏವಂ ಶೌಚವಿಧಿಃ ಪ್ರೋಕ್ತೋ ದ್ವಿಜಾನಾಂ ಶುದ್ಧಿಹೇತವೇ ।**
**ಪೂರ್ವಂ ಕೃತ್ವಾ ತು ಶೌಚಂ ಹಿ ಪಶ್ಚಾತ್ ಸ್ನಾನಂ ಸಮಾಚರೇತ್ ॥** -ಸ್ಮೃ.ರ.

ಈ ಪ್ರಕಾರ ಬ್ರಾಹ್ಮಣರು ಶುದ್ಧಿಗೋಸ್ಕರ ಶೌಚವಿಧಿಯನ್ನು ಮೊದಲು ಮಾಡಿಕೊಂಡು ಆಮೇಲೆ ವಿಧಿಪ್ರಕಾರ ಸ್ನಾನ ಮಾಡಬೇಕು.

## ಬ್ರಾಹ್ಮಣನ ಬಲಕೈಯಲ್ಲಿರುವ ೫ ತೀರ್ಥಗಳು:

**ವಿಪ್ರಸ್ಯ ದಕ್ಷಿಣೇ ಪಾಣೌ ಮೂಲೇಽಂಗುಷ್ಠಸ್ಯ ನಿತ್ಯದಾ ।**
**ಸ್ಯಾದ್ ಬ್ರಹ್ಮತೀರ್ಥಂ ಮಧ್ಯೇ ತು ವಾಹ್ನೇಯಮಘನಾಶನಮ್ ॥**

**ಮಧ್ಯೇ ವಾಂಗುಷ್ಠತರ್ಜನ್ಯೋಃ ಪೈತ್ರಂ ತೀರ್ಥಂ ದ್ವಿಜಸ್ಯ ತು ।**
**ಆರ್ಷಂ ಕನಿಷ್ಠಿಕಾಮೂಲೇ ದೈವಮಗ್ರಾಂಗುಲೀಷು ವೈ ॥**

**ತೀರ್ಥಾನ್ ವಿದಿತ್ವಾ ಪಂಚೈತಾನ್ ತತಃ ಕರ್ಮ ಸಮಾಚರೇತ್ ।**
**ಅವಿದಿತ್ವಾ ಚರೇನ್ಮೋಹಾನ್ನಾಶ್ನುತೇ ಕರ್ಮಣಃ ಫಲಮ್ ॥**

ವೇದಜ್ಞನಾದ ಬ್ರಾಹ್ಮಣನ ಬಲಕೈಯ ಅಂಗುಷ್ಠಮೂಲದಲ್ಲಿ ಬ್ರಾಹ್ಮತೀರ್ಥವೂ, ಮಧ್ಯದಲ್ಲಿ ಪಾಪಪರಿಹಾರ ಮಾಡತಕ್ಕ ವಹ್ನಿ(ಅಗ್ನಿ)ತೀರ್ಥವೂ, ಅಂಗುಷ್ಠತರ್ಜನೀ (ತೋರುಬೆರಳು) ಮಧ್ಯದಲ್ಲಿ ಪಿತೃತೀರ್ಥವೂ, ಕಿರುಬೆರಳ (ಕನಿಷ್ಠಿಕಾ) ಬುಡದಲ್ಲಿ ಋಷಿತೀರ್ಥವೂ, ನಾಲ್ಕು ಬೆರಳ ತುದಿಯಲ್ಲಿ ದೇವತೀರ್ಥವೂ ಇದೆ. ಹೀಗೆ ಬ್ರಾಹ್ಮಣನು ತನ್ನ ಬಲಕೈಯಲ್ಲಿರುವ ಐದು ತೀರ್ಥಗಳ ಸ್ಥಾನವನ್ನು ಚೆನ್ನಾಗಿ ತಿಳಿದುಕೊಂಡು ಎಲ್ಲಾ ಕರ್ಮಗಳನ್ನೂ ಮಾಡಬೇಕು. 'ಬ್ರಾಹ್ಮೇಣ ತೀರ್ಥೇನ ನಿತ್ಯಮುಪಸ್ಪೃಶೇತ್' ಬ್ರಾಹ್ಮತೀರ್ಥದಲ್ಲಿ ನಿತ್ಯವೂ ಆಚಮನ, ತೀರ್ಥಪ್ರಾಶನ, ಆಪೋಶನಗಳನ್ನು ಮಾಡಬೇಕು.

ಶಬ್ದೇನಾಪೋಶನಂ ಪೀತ್ವಾ ಶಬ್ದೇನ ಘೃತಪಾಯಸಮ್ ।
ಶಬ್ದೇನಾಪಃ ಪಯಃ ಪೀತ್ವಾ ಸುರಾಪಾನಸಮಂ ಭವೇತ್ ॥ –ಸ್ಮೃ.ರ.

ಆಚಮನ, ತೀರ್ಥಪ್ರಾಶನ, ಆಪೋಶನಗಳನ್ನು ಮಾಡುವಾಗ, ಘೃತಪಾಯಸ ಸ್ವೀಕರಿಸುವಾಗ, ನೀರು, ಹಾಲು ಕುಡಿಯುವಾಗ ಶಬ್ದ ಮಾಡಿಕೊಂಡರೆ ಸುರಾಪಾನಕ್ಕೆ ಸಮವಾಗುವುದು.

ಗೋಕರ್ಣಾಕೃತಿಹಸ್ತೇನ ಮಾಷಮಗ್ನಜಲಂ ಪಿಬೇತ್ ।
ತನ್ನ್ಯೂನಮಧಿಕಂ ಪೀತ್ವಾ ಸುರಾಪಾನಸಮಂ ಭವೇತ್ ॥ –ಸ್ಮೃ.

ಅಂಗುಷ್ಠಾಗ್ರಂ ಸಮಾಕುಂಚ್ಯ ಮಧ್ಯಮಾ ಮಧ್ಯಪರ್ವಣಿ ।
ಗೋಕರ್ಣಂ ತದ್ಧಿ ವಿಜ್ಞೇಯಂ ಸರ್ವೇಷ್ವಾಚಮನೇಷ್ವಪಿ ॥

ಬಲಕೈಯ ಅಂಗುಷ್ಠವನ್ನು ಬಗ್ಗಿಸಿ ಮಧ್ಯಬೆರಳಿನ ಮಧ್ಯಗಂಟಿಗೆ ಮುಟ್ಟಿಸಿದಾಗ ಗೋಕರ್ಣಾಕೃತಿ ಆಗುತ್ತದೆ. ಬಲಕೈಯನ್ನು ಗೋಕರ್ಣಾಕೃತಿ ಮಾಡಿಕೊಂಡು ಕೈಯ ಮಧ್ಯದಲ್ಲಿ ಅಗ್ನಿತೀರ್ಥದಲ್ಲಿ ಉದ್ದು ಮುಳುಗುವಷ್ಟೇ ನೀರನ್ನು ಹಾಕಿ ಶಬ್ದ ಮಾಡದೆ ಬ್ರಾಹ್ಮತೀರ್ಥದಲ್ಲಿ ಆಚಮನ ಮಾಡಬೇಕು. ಉದ್ದು ಮುಳುಗುವಷ್ಟಕ್ಕಿಂತ ನೀರು ಹೆಚ್ಚು ಅಥವಾ ಕಡಮೆ ಆದರೆ ಸುರಾಪಾನಕ್ಕೆ ಸಮವಾಗುತ್ತದೆ. ಮಲಗಿ, ಕಾಲುಗಳಲ್ಲಿ ಚಪ್ಪಲಿ ಹಾಕಿಕೊಂಡು, ನಿಂತುಕೊಂಡು, ತಲೆಗೆ ವಸ್ತ್ರ ಸುತ್ತಿಕೊಂಡು, ಅಂಗಿ ಹಾಕಿಕೊಂಡು, ಕಾಲು ಗಂಟುಗಳ ಹೊರಗೆ ಕೈ ಇಟ್ಟುಕೊಂಡು, ಉಚ್ಚಾಸನದಲ್ಲಿ ಕುಳಿತುಕೊಂಡು ಆಚಮನ ಮಾಡಬಾರದು. ಹಾಗೆಯೇ ಬಿಸಿನೀರಿನಿಂದ, ಮಳೆನೀರಿನಿಂದ, ಪಾತ್ರೆಯ ತೂತಿನಿಂದ ಬಂದ ನೀರಿನಿಂದ, ತೀರ್ಥದಿಂದ, ಶೂದ್ರಾದಿಗಳು ಮುಟ್ಟಿದ ನೀರಿನಿಂದ, ಕ್ರಿಮಿಯುಳ್ಳ ಬೇರೆ ಪ್ರಾಣಿಗಳು ಮುಟ್ಟಿದ ನೀರಿನಿಂದಲೂ ಆಚಮನ ಮಾಡಬಾರದು.

ಪ್ರತಿನಿತ್ಯ ಪಂಚಾಂಗಪಠನ ಮಾಡಬೇಕು. ತಿಥಿ, ವಾರ, ನಕ್ಷತ್ರ, ಯೋಗ, ಕರಣ –ಈ ಐದರ ಸಮೂಹಕ್ಕೆ ಪಂಚಾಂಗ ಎಂದು ಹೆಸರು.

ಶ್ರೀಮತ್ಪುಣ್ಯತರಾದ್ಯಶೇಷಶೋಭನದಿನೇ ಸೂರ್ಯೋದಯಾನಂತರೇ
ತೇ ವಕ್ಷ್ಯಾಮ್ಯಹಮಾಶ್ರಯಾಮಿ ಸತತಂ ಕೃಷ್ಣೇಷ್ಟಚಿಂತಾಮಣೇ ।
ಮೇಘಶ್ಯಾಮಲರುಗ್ಮಿಣೀಶಕರುಣಾಸಿಂಧೋ ಯದೂನಾಂ ಪತೇ
ಶ್ರೀಸತ್ಯಾಧಿಪಮಂಗಲಪ್ರದಮಿದಂ ಪಂಚಾಂಗಮಾಕರ್ಣ್ಯತಾಮ್ ॥

ಮಂಗಲಂ ನಿತ್ಯಕಲ್ಯಾಣಂ ಲಕ್ಷ್ಮೀಸೌಭಾಗ್ಯವರ್ಧನಮ್ ।
ಮನೋರಥಾವಾಪ್ತಿಕರಂ ಪಂಚಾಂಗಮವಧಾರಯ ॥

ಎಂದು ಹೇಳಿ ಆಯಾಯ ದಿವಸದ ತಿಥಿ, ವಾರ, ನಕ್ಷತ್ರ, ಯೋಗ, ಕರಣ, ವಿಷ, ಅಮೃತಗಳನ್ನು ಪಠಿಸಬೇಕು. ಇದನ್ನು ಸೂರ್ಯೋದಯಾನಂತರ ಪಠನೆ ಮಾಡಬೇಕೆಂದಿದೆ. ಪ್ರತಿನಿತ್ಯ ಪಂಚಾಂಗಪಠನೆ ಮಾಡಿದರೆ,

ತಿಥೇಶ್ಚ ಶ್ರಿಯಮಾಪ್ನೋತಿ ವಾರಾದಾಯುಷ್ಯವರ್ಧನಮ್ ।
ನಕ್ಷತ್ರಾದ್ಧರತೇ ಪಾಪಂ ಯೋಗಾದ್ರೋಗನಿವಾರಣಮ್ ॥
ಕರಣಾತ್ಕಾರ್ಯಸಿದ್ಧಿಃ ಸ್ಯಾತ್ ಪಂಚಾಂಗಫಲಮುತ್ತಮಮ್ ॥

ತಿಥಿಯ ಪಠನದಿಂದ ಸಂಪತ್ತು ಬರುತ್ತದೆ. ವಾರದಿಂದ ಆಯುಷ್ಯಾಭಿವೃದ್ಧಿಯೂ, ನಕ್ಷತ್ರದಿಂದ ಪಾಪಪರಿಹಾರವೂ, ಯೋಗದಿಂದ ರೋಗ ನಿವಾರಣೆಯೂ, ಕರಣದಿಂದ ಕಾರ್ಯಸಿದ್ಧಿಯೂ ಆಗುತ್ತದೆ. ಮಾತ್ರವಲ್ಲದೆ,

**ಪಂಚಾಂಗಂ ಪಠತೇ ನಿತ್ಯಂ ಶ್ರೋತುಮಿಚ್ಛಂತಿ ಯೇ ನರಾಃ ।**
**ಅಗ್ನಿಷ್ಟೋಮಫಲಂ ತೇಷಾಂ ಗಂಗಾಸ್ನಾನಂ ದಿನೇದಿನೇ ॥**

ಯಾರು ಪ್ರತಿನಿತ್ಯ ಪಂಚಾಂಗ ಪಠನ ಮಾಡಿತ್ತಾರೋ, ಅಥವಾ ಪಠನ ಮಾಡುವುದನ್ನು ಶ್ರದ್ಧೆಯಿಂದ ಕೇಳುತ್ತಾರೋ ಅವರಿಗೆ ಅಗ್ನಿಷ್ಟೋಮಯಜ್ಞದ ಫಲವೂ, ಪ್ರತಿನಿತ್ಯ ಗಂಗಾಸ್ನಾನ ಮಾಡಿದ ಫಲವೂ ಬರುವುದು.

ಪಂಚಾಂಗದ ಪಠನ ಪ್ರತಿನಿತ್ಯವೂ ಏಕೆ ಮಾಡಬೇಕು? ಎಂದರೆ, ನಾವು ಮಾಡುವ ಪ್ರತಿಯೊಂದು ಕರ್ಮದ ಪ್ರಾರಂಭದಲ್ಲಿ ಸಂಕಲ್ಪ ಮಾಡಿ ಕರ್ಮ ಮಾಡಬೇಕು. ಸಂಕಲ್ಪದಲ್ಲಿ–

**ಅಬ್ದಾಯನರ್ತುಮಾಸಾಶ್ಚ ಪಕ್ಷತಿಥ್ಯೃಕ್ಷವಾರಭಮ್ ।**
**ಯೋಗಶ್ಚ ಕರಣಂ ಚೇತಿ ಸಂಕಲ್ಪೋಽಯಮುದಾಹೃತಃ ॥** –ಸ್ಮೃತಿ

ಸಂವತ್ಸರ, ಅಯನ, ಋತು, ಸೌರಮಾಸ, ಚಾಂದ್ರಮಾಸ, ಪಕ್ಷ, ತಿಥಿ, ನಕ್ಷತ್ರ, ವಾರ, ಯೋಗ, ಕರಣ ಇವುಗಳನ್ನು ಹೇಳಬೇಕಾದ್ದರಿಂದ ಪ್ರತಿನಿತ್ಯವೂ ಪಂಚಾಂಗಪಠನ ಮಾಡಿದರೆ ತಾನೆ ಗೊತ್ತಾಗುತ್ತದೆ. ಅದೂ ಅಲ್ಲದೆ ಇನ್ನೊಬ್ಬರು ತಿಳಿಯದವರು ಕೇಳಿದಾಗ ಹೇಳಲೂ ಅನುಕೂಲವಾಗುತ್ತದೆ.

**ಸ್ನಾನವಿಧಿಃ**

**ಉತ್ತಮಂ ತು ನದೀಸ್ನಾನಂ ತಟಾಕೇ ಮಧ್ಯಮಂ ಸ್ಮೃತಮ್ ।**
**ವಾಪೀ ಸ್ನಾನಂ ತು ಸಾಮಾನ್ಯಂ ಭಾಂಡಸ್ನಾನಂ ವೃಥಾ ಭವೇತ್ ॥**

ನದಿಗಳಲ್ಲಿ ಸ್ನಾನ ಉತ್ತಮ, ಕೆರೆಯಲ್ಲಿ ಮಧ್ಯಮ, ಬಾವಿಯಲ್ಲಿ ಸಾಮಾನ್ಯ, ಸಂಗ್ರಹಿಸಿದ ನೀರು ನಿಷ್ಫಲ.

**ಸಂಕಲ್ಪಃ ಸೂಕ್ತಪಠನಂ ಪ್ರೋಕ್ಷಣಂ ಚಾಘಮರ್ಷಣಮ್ ।**
**ದೇವಾದಿತರ್ಪಣಂ ಚೈವ ಸ್ನಾನಂ ಪಂಚಾಂಗಮಿಷ್ಯತೇ ॥** –ಕೃಸ್ಮೃ

ಎಂದು ಹೇಳಿರುವಂತೆ ಸ್ನಾನಸಂಕಲ್ಪ ಮಾಡಿ 'ಯಾಃ ಪ್ರವತೋ ನಿವತ ಉದ್ವತ...'ಈ ಮಂತ್ರ ಹೇಳಿ 'ನಂದಿನೀ ನಲಿನೀ ಸೀತಾ...' ಇತ್ಯಾದಿ ಪ್ರಾರ್ಥನಾ ಮಂತ್ರ ಹೇಳಿ, 'ನಮಃ ಕಮಲನಾಭಾಯ...' ಇತ್ಯಾದಿ ಮಂತ್ರಗಳಿಂದ ದೇವರಿಗೂ, ಬ್ರಹ್ಮಾದಿದೇವತೆಗಳಿಗೂ ಅರ್ಘ್ಯ ಕೊಟ್ಟು, ಒಂದು ಸಲ ಮುಳುಗಬೇಕು. 'ಹಿರಣ್ಯ ಶೃಂಗಂ ವರುಣಂ ಪ್ರಪದ್ಯೇ...' ಎಂದು ವರುಣಸೂಕ್ತ (ಇದು ನಾರಾಯಣೋಪನಿಷತ್ತಿನಲ್ಲಿದೆ). ಇದರಲ್ಲಿ ಕರ್ಮಪರವಾದ ಅರ್ಥ ಸ್ಪಷ್ಟ. ಈ ಸೂಕ್ತವನ್ನು ಪಠನ ಮಾಡಬೇಕು.

**ಉದ್ಧೃತೇತಿ ಮೃದಾಲಿಪ್ಯ ದ್ವಿಷಡಷ್ಟಷಡಕ್ಷರೈಃ ।**
**ತ್ರಿರ್ನಿಮಜ್ಯಾಪ್ಯಸೂಕ್ತೇನ ಪ್ರೋಕ್ಷಯಿತ್ವಾ ಪುನಸ್ತಥಾ ॥**
**ಮೃದಾಲಿಪ್ಯ ನಿಮಜ್ಯಾಪ್ಸು ತ್ರಿರ್ಜಪೇದಘಮರ್ಷಣಮ್ ॥** –ಸ.ಸ್ಮೃ

'ಉದ್ಧೃತಾಸಿ ವರಾಹೇಣ...' ಎಂದು ಭೂಸೂಕ್ತ. (ಇದು ನಾರಾಯಣ ಉಪನಿಷತ್ತಿನಲ್ಲಿದೆ.) ಈ ಮಂತ್ರದಿಂದ ತುಲಸೀಮೃತ್ತಿಕೆಯನ್ನು ಹಚ್ಚಿ, ವಾಸುದೇವ ದ್ವಾದಶಾಕ್ಷರ, ನಾರಾಯಣಾಷ್ಟಾಕ್ಷರ, ವಿಷ್ಣುಷಡಕ್ಷರ ಮಂತ್ರ ಹೇಳಿ ಮೂರು ಸಲ ಮುಳುಗಬೇಕು. 'ಆಪೋ ಹಿ ಷ್ಠಾ...' ಮಂತ್ರ ಹೇಳಿ ಜಲವನ್ನು ಶಿರಸ್ಸಿಗೆ ಪ್ರೋಕ್ಷಿಸಿ, ಪುನಃ ಮೃತ್ತಿಕೆಯನ್ನು ತೆಗೆದು 'ತ್ರಾತಾರಮಿಂದ್ರ' ಎಂಬ ಮಂತ್ರದಿಂದ ಅಭಿಮಂತ್ರಿಸಿ, 'ತತ್ಸೂರ್ಯ ರೋದಸೀ...' ಎಂದು ಮಂತ್ರದಿಂದ ಮೂರುಪಾಲು ಮಾಡಿ ಸೂರ್ಯನಿಗೆ ತೋರಿಸಿ,

**ಮಕರೋ ವಾಹನೋ ಯಸ್ಯ ಪಾಶಪಾಣಿಶ್ಚತುರ್ಭುಜಃ ।**
**ಮೃದಾ ತ್ಯಾಗೇನ ಮೇ ದದ್ಯಾತ್ ಪುಣ್ಯಂ ಮಕರವಾಹನಃ ॥**

ಎಂದು ಒಂದು ಭಾಗವನ್ನು ತೀರ್ಥಕ್ಕೆ (ನೀರಿಗೆ) ಹಾಕಿ, ಎರಡನೆಯ ಭಾಗವನ್ನು ಇಂದ್ರಾದಿ ದಿಕ್ಪಾಲಕರಿಗೆ ಕೊಟ್ಟು, ಮೂರನೆಯ ಅಂಶವನ್ನು ತಲೆಯಿಂದ ಕಾಲುಗಂಟಿನವರೆಗೆ ಲೇಪಿಸಿ, ಪುನಃ 'ಋತಂ ಚ ಸತ್ಯಂ ಚ' ಎಂಬ ಅಘಮರ್ಷಣ ಸೂಕ್ತವನ್ನು ಮೂರು ಸಲ ಹೇಳಿ ಮುಳುಗಬೇಕು. ಮುಳುಗುವಾಗ,

**ಸ್ರಷ್ಟಾರಂ ಸರ್ವಲೋಕಾನಾಂ ಸ್ಮೃತ್ವಾ ನಾರಾಯಣಂ ಪರಮ್ ।**
**ಯತಃಶ್ವಾಸೋ ನಿಮಜ್ಯಾಪ್ಸು ಪ್ರಣವೇನೋತ್ಥಿತಸ್ತತಃ ॥** –ಸ.ಸ್ಮೃ

ಸರ್ವಲೋಕದ ಸೃಷ್ಟಿಕರ್ತನಾದ, ಅಘಮರ್ಷಣಸೂಕ್ತದಿಂದ ಹೇಳಲ್ಪಡುವ ಉತ್ತಮವಾದ ನಾರಾಯಣನನ್ನು ಸ್ಮರಿಸಿ, ಶ್ವಾಸವನ್ನು ಬಿಗಿಹಿಡಿದು ನೀರೊಳಗೆ ಮುಳುಗಿ 'ಓಂ' ಎಂಬ ಪ್ರಣವಮಂತ್ರವನ್ನುಚ್ಚರಿಸಿ ಮೇಲಿದ್ದು,

**ಸಿಂಚೇತ್ ಪುರುಷಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್ ।** –ಸ.ಸ್ಮೃ

ಚೇತನ ಮತ್ತು ಅಚೇತನರೂಪವಾದ ಪ್ರಪಂಚದ ಸೃಷ್ಟಿಕರ್ತನೂ ತನ್ನ ದೇಹದಲ್ಲಿ ಪಂಚಕೋಶಾಂತರ್ಗತನೂ ಆದ ಶ್ರೀಹರಿಯನ್ನು ಶಿರಸ್ಸಿನಲ್ಲಿರುವ ಸೂರ್ಯಾಂತರ್ಗತ ತುರೀಯರೂಪೀಹರಿಯನ್ನು ಸ್ಮರಿಸುತ್ತಾ ತನ್ನ ಕೈಯಲ್ಲಿ ಶಂಖಮುದ್ರೆಯನ್ನು ಮಾಡಿ ಪುರುಷಸೂಕ್ತ ಹೇಳುತ್ತಾ ಶಿರಸ್ಸಿನ ಮೇಲೆ ನೀರನ್ನು ಪ್ರೋಕ್ಷಿಸಬೇಕು. ಅಘಮರ್ಷಣಸೂಕ್ತ ಎಂದರೆ ಪಾಪಪರಿಹಾರ ಮಾಡುವ ಸೂಕ್ತ.

**ಯಥಾಶ್ವಮೇಧಃ ಕ್ರತುರಾಟ್ ಸರ್ವಪಾಪಾಪನೋದನಃ ।**
**ತಥೈವಾಘಮರ್ಷಣಂ ಸೂಕ್ತಂ ಸರ್ವಪಾಪನೋದನಂ ॥** –ಸ್ಮೃ.ರ

ಹೇಗೆ ಸಕಲ ಯಜ್ಞಗಳಲ್ಲಿ ಶ್ರೇಷ್ಠವಾದ ಅಶ್ವಮೇಧಯಜ್ಞವು ಸರ್ವಪಾಪಗಳನ್ನು ಪರಿಹರಿಸುತ್ತದೆಯೋ ಅದರಂತೆಯೇ ಈ ಅಘಮರ್ಷಣಸೂಕ್ತವು ಸಕಲ ಪಾಪಗಳನ್ನು ಪರಿಹರಿಸುತ್ತದೆ. ಈ ಸೂಕ್ತವನ್ನು ಮೂರು ಸಲ ಪಠನ ಮಾಡುವುದರಿಂದ, ಪ್ರಾತರ್ಮಧ್ಯಾಹ್ನಸಾಯಾಹ್ನವೆಂಬ ಮೂರು ಕಾಲದಲ್ಲಿ, ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ, ಮನೋವಾಕ್ಕಾಯಗಳೆಂಬ ಮೂರು ಕರಣಗಳಲ್ಲಿ ಮಾಡಿದ ಸಮಸ್ತ ಪಾಪವೂ ಪರಿಹಾರವಾಗುವುದು. ಆಮೇಲೆ ದೇವ ಋಷಿ (ಅಧಿಕಾರ ಇದ್ದವರು) ಪಿತೃತರ್ಪಣ ಕೊಟ್ಟು ಪುನಃ ಸ್ನಾನಮಾಡಿ (ಆಮೇಲೆ ಪುರುಷಸೂಕ್ತದಿಂದ ತನ್ನ ಕೈಯ ಶಂಖಮುದ್ರೆಯಿಂದ ಶಿರಸ್ಸಿಗೆ ಅಭಿಷೇಕ ಮಾಡಿಕೊಂಡು) ಎರಡುಸಲ ಆಚಮನಮಾಡಿ ನೀರಿನಿಂದ ಮೇಲೆಕ್ಕೆ ಬಂದು ಎರಡು ಬೊಗಸೆಯಲ್ಲಿ ನೀರು ತೆಗೆದು,

**ಯನ್ಮಯಾ ದೂಷಿತಂ ತೋಯಂ ಶಾರೀರಮಲಸಂಭವಮ್ ।**
**ತದ್ದೋಷಪರಿಹಾರಾರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಮ್ ॥**

ನಾನು ಸ್ನಾನ ಮಾಡುವಾಗ ಶರೀರದ ಕೊಳೆಯಿಂದ ನೀರು ದೂಷಿತವಾಗಿದೆ. ಆ ದೋಷಪರಿಹಾರಕ್ಕಾಗಿ ಯಕ್ಷ್ಮನಿಗೆ ತರ್ಪಣ ಕೊಡುತ್ತೇನೆ ಎಂದು ಬೊಗಸೆಯಲ್ಲಿದ್ದ ನೀರನ್ನು ಜಲಾಶಯದ ಬದಿಯಲ್ಲಿರುವ ಕಲ್ಲಿನ ಮೇಲೆ ಬಿಡಬೇಕು.

ಹೀಗೆ ಸಂಕಲ್ಪ, ಸೂಕ್ತಪಠನ, ಪ್ರೋಕ್ಷಣ, ಅಘಮರ್ಷಣಸೂಕ್ತಪಠನ, ದೇವಾದಿ ತರ್ಪಣಗಳೆಂಬ ಐದು ಅಂಗಗಳನ್ನೊಳಗೊಂಡ ಸ್ನಾನವನ್ನು ಪ್ರತಿನಿತ್ಯ ಸಕಾಲದಲ್ಲಿ ಕ್ರಮಪ್ರಕಾರ ಮಾಡಿದಾಗ ಅಂತಹ ವ್ಯಕ್ತಿ–

**ಗುಣಾ ದಶ ಸ್ನಾನಕೃತೋ ಹಿ ಪುಂಸೋ ರೂಪಂ ಚ ತೇಜಶ್ಚ ಬಲಂ ಚ ಶೌಚಮ್ ।**
**ಆಯುಷ್ಯಮಾರೋಗ್ಯಮಲೋಲುಪತ್ವಂ ದುಃಸ್ವಪ್ನನಾಶಂ ಚ ತಪಶ್ಚ ಮೇಧಾಮ್ ॥** –ಸ್ಮೃ

ಸೌಂದರ್ಯ, ತೇಜಸ್ಸು, ಬಲ, ಶೌಚ (ಶುಚಿತ್ವ), ಆಯುಷ್ಯ, ಆರೋಗ್ಯ, ದುರಾಸೆಗಳ ತ್ಯಾಗ, ದುಃಸ್ವಪ್ನನಾಶ, ತಪಸ್ಸು ಹಾಗೂ ಮೇಧಾಶಕ್ತಿಗಳೆಂಬ ಹತ್ತು ಗುಣಗಳನ್ನು ಹೊಂದುವನು.

**ಶೌಚೇ ಯತ್ನಃ ಸದಾ ಕಾರ್ಯ ತನ್ಮೂಲೋ ಹಿ ದ್ವಿಜಃ ಸ್ಮೃತಃ ।**
**ಶೌಚಾಚಾರವಿಹೀನಸ್ಯ ಸಮಸ್ತಾ ನಿಷ್ಫಲಾಃ ಕ್ರಿಯಾಃ ॥** –ಸ್ಮೃ.ರ.

ಬ್ರಾಹ್ಮಣನ ಮೂಲಧರ್ಮವೇ ಶೌಚಾಚಾರ. ಶೌಚಾಚಾರ ಇಲ್ಲದೆ ಮಾಡುವ ಎಲ್ಲಾ ಕ್ರಿಯೆಗಳೂ ನಿಷ್ಫಲ.

**ಪಂಚೇಂದ್ರಿಯಸ್ಯ ದೇಹಸ್ಯ ಬುದ್ಧೇಶ್ಚ ಮನಸಸ್ತಥಾ ।**
**ದ್ರವ್ಯದೇಶಕ್ರಿಯಾಣಾಂ ಚ ಶುದ್ಧಿರಾಚಾರ ಇಷ್ಯತೇ ॥** –ಸ್ಮೃ.ರ.

ಐದು ಜ್ಞಾನೇಂದ್ರಿಯಗಳು ಹಾಗೂ ಕರ್ಮೇಂದ್ರಿಯಗಳ ದೇಹ, ಬುದ್ಧಿ, ಮನಸ್ಸು, ಉಪಯೋಗಮಾಡುವ ಪದಾರ್ಥಗಳು, ಕುಳಿತುಕೊಳ್ಳುವ ಸ್ಥಳ, ಮಾಡುವ ಕರ್ಮಗಳು –ಇವುಗಳ ಶುದ್ಧಿಯೇ ಆಚಾರ ಎಂದು ಹೇಳಿದೆ. ಮತ್ತು,

**ಸ್ನಾನಮೂಲಾಃ ಕ್ರಿಯಾಃ ಸರ್ವಾಃ ಸಂಧ್ಯೋಪಾಸನಮೇವ ಚ ।**
**ತಸ್ಮಾತ್ ಸರ್ವಪ್ರಯತ್ನೇನ ಸ್ನಾನಂ ಕುರ್ಯಾತ್ ಸಮಾಹಿತಃ ॥** –ಸ್ಮೃ.

ಸಂಧ್ಯಾವಂದನೆ, ದೇವಪೂಜಾದಿ ಸರ್ವಕರ್ಮಗಳನ್ನೂ ಸ್ನಾನ ಮಾಡಿಯೇ ಮಾಡಬೇಕಾದ್ದರಿಂದ ಪ್ರಯತ್ನಪೂರ್ವಕವಾಗಿ ಬೆಳಗ್ಗೆ ಸಕಾಲದಲ್ಲಿ ಎದ್ದು ಶೌಚಾಚಾರ ಗಳನ್ನು ಪೂರೈಸಿ, ಪ್ರಾತಃಸ್ನಾನವನ್ನು ಮೊದಲು ಮಾಡಬೇಕು.

**ಆಚಾರಾದ್ವಿಚ್ಯುತೋ ವಿಪ್ರೋ ನ ವೇದಫಲಮಶ್ನುತೇ ।**
**ಆಚಾರೇಣ ತು ಸಂಯುಕ್ತಃ ಸಂಪೂರ್ಣಫಲಭಾಕ್ ಭವೇತ್ ॥** –ಸ್ಮೃ.

ಬ್ರಾಹ್ಮಣನು ವೇದೋಕ್ತವಾದ ಫಲವನ್ನು ಪೂರ್ಣವಾಗಿ ಪಡೆಯಬೇಕಾದರೆ ಆಚಾರಯುಕ್ತನಾಗಿರಬೇಕು.

**ಆಚಾರಹೀನಂ ನ ಪುನಂತಿ ವೇದಾಃ ಯದ್ಯಪ್ಯಧೀತಾಃ ಸಹ ಷಡ್ಭಿರಂಗೈಃ ।**
**ಛಂದಾಂಸ್ಯೇನಂ ಮೃತ್ಯುಕಾಲೇ ತ್ಯಜಂತಿ ನೀಡಂ ಶಕುಂತಾ ಇವ ಜಾತಪಕ್ಷಾಃ ॥** –ಸ್ಮೃ.

ಬ್ರಾಹ್ಮಣನೊಬ್ಬ ಷಡಂಗ ವೇದಾಧ್ಯಯನ ನಡೆಸಿದ್ದರೂ, ವೇದೋಕ್ತ ಆಚಾರಗಳನ್ನು ಅಳವಡಿಸಿಕೊಂಡಿಲ್ಲವಾದರೆ, ಆ ವೇದಗಳು ಅವನನ್ನು ಪವಿತ್ರಗೊಳಿಸಲಾರವು. ಅಲ್ಲದೆ, ಅವನ ಮರಣಕಾಲದಲ್ಲಿ ವೇದಗಳೆಲ್ಲವೂ ಅವನನ್ನು ತ್ಯಜಿಸುವವು. ರೆಕ್ಕೆ ಪಡೆದ ಹಕ್ಕಿಗಳೆಲ್ಲವೂ ಗೂಡಿನಿಂದ ಹಾರಿಹೋಗುವಂತೆ,

**ಚತುರ್ಣಾಮಪಿ ವರ್ಣಾನಾಮಾಚಾರೋ ಧರ್ಮಪಾಲಕಃ ।**
**ಆಚಾರಭ್ರಷ್ಟದೇಹಾನಾಂ ಭವೇದ್ಧರ್ಮಃ ಪರಾಙ್ಮುಖಃ ॥**

**ಏವಮಾಚಾರತೋ ದೃಷ್ಟ್ವಾ ಧರ್ಮಸ್ಯ ಮುನಯೋ ಗತಿಮ್ ।**
**ಸರ್ವಸ್ಯ ತಪಸೋ ಮೂಲಮಾಚಾರಂ ಜಗೃಹುಃ ಪರಮ್ ॥** –ಸ್ಮೃ.

ನಾಲ್ಕು ವರ್ಣದವರಿಗೂ ಆಚಾರವು ಧರ್ಮಪಾಲಕ. ಆಚಾರಹೀನರಾದರೆಂದರೆ ಧರ್ಮವು ಅವರಿಂದ ಪರಾಙ್ಮುಖವಾಗುವುದು. ಹೀಗೆ ಆಚಾರಕ್ಕೂ ಧರ್ಮಕ್ಕೂ ಇರುವ ನಂಟನ್ನು ಗುರುತಿಸಿ ಮುನಿಗಳು ಸಕಲವಿಧ ತಪಸ್ಸಿಗೂ ಆಚಾರವೇ ಮೂಲವೆಂದು ಪರಿಗಣಿಸಿರುವರು.

**ಯಃ ಸ್ವಧರ್ಮಂ ಪರಿತ್ಯಜ್ಯ ಭಕ್ತಿಮಾತ್ರೇಣ ಜೀವತಿ ।**
**ನ ತಸ್ಯ ತುಷ್ಯತೇ ವಿಷ್ಣುರಾಚಾರೇಣೈವ ತುಷ್ಯತಿ ॥** –ನಾರದಪುರಾಣ

ಯಾವಾತನು ತನ್ನ ಧರ್ಮವನ್ನು (ಆಚಾರಾದಿಗಳನ್ನು) ಬಿಟ್ಟು ಕೇವಲ ಭಕ್ತಿಯನ್ನು ಮಾತ್ರ ಮಾಡಿಕೊಂಡು ಜೀವಿಸುತ್ತಾನೋ ಅವನಿಗೆ ವಿಷ್ಣು ಸಂತುಷ್ಟನಾಗುವುದಿಲ್ಲ. ಸ್ವವಿಹಿತ ಆಚಾರಗಳನ್ನು ಮಾಡಿಕೊಂಡು ಭಕ್ತಿಯನ್ನು ಮಾಡಿದರೆ ಮಾತ್ರ ಸಂತುಷ್ಟನಾಗುತ್ತಾನೆ.

**ಷಟ್ಕರ್ಮಾಭಿರತೋ ನಿತ್ಯಂ ದೇವತಾಽತಿಥಿಪೂಜಕಃ ।**
**ಹುತಶೇಷಂ ತು ಭುಂಜಾನೋ ಬ್ರಾಹ್ಮಣೋ ನಾವಸೀದತಿ ॥** –ಸ್ಮೃ.ರ.

ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮನಿರತನಾದ, ದೇವತೆಗಳ ಮತ್ತು ಅತಿಥಿಗಳ ಅರ್ಚಕನಾದ, ವೈಶ್ವದೇವಾದಿಗಳನ್ನು ನಡೆಸಿ ಅದರ ಶೇಷವನ್ನು ಸ್ವೀಕರಿಸುವ ಸದಾಚಾರ-ಸಂಪನ್ನನಾದ ಬ್ರಾಹ್ಮಣನು ಎಂದೂ ನಾಶ ಹೊಂದುವುದಿಲ್ಲ.

**ಆಚಿನೋತಿ ಹಿ ಶಾಸ್ತ್ರಾಣಿ ಆಚಾರೇ ಸ್ಥಾಪಯತ್ಯುತ ।**
**ಸ್ವಯಮಾಚರತೇ ಯಸ್ತು ತಮಾಚಾರ್ಯಂ ಪ್ರಚಕ್ಷತೇ ॥**

ಶಾಸ್ತ್ರವನ್ನು ಚೆನ್ನಾಗಿ ತಿಳಿಯಬೇಕು. ಬೇರೆಯವರನ್ನು ಶಾಸ್ತ್ರೋಕ್ತ ಆಚಾರಗಳಲ್ಲಿ ತೊಡಗಿಸಬೇಕು. ತಾನೂ ಆಚಾರಗಳನ್ನು ಪಾಲಿಸುತ್ತಿರಬೇಕು. ಅಂತಹವನನ್ನೇ 'ಆಚಾರ್ಯ' ಎಂದು ಜ್ಞಾನಿಗಳು ಪರಿಗಣಿಸಿರುವರು. ಹೀಗೆ ಆಚಾರಕ್ಕೆ ಶಾಸ್ತ್ರದಲ್ಲಿ ಬಹಳ ಮಹತ್ತ್ವವನ್ನು ನೀಡಿರುವುದರಿಂದ 'ಆಚಾರ್ಯ' ಎನಿಸುವ ಪುರೋಹಿತರು ಆದಷ್ಟು ಆಚಾರಶೀಲರಾಗಿರಬೇಕು.

**ಶ್ರದ್ಧಯಾ ಧಾರ್ಯತೇ ಧರ್ಮಃ ಬಹುಭಿರ್ನಾರ್ಥರಾಶಿಭಿಃ ।**
**ನಿಷ್ಕಿಂಚನಾ ಹಿ ಮುನಯಃ ಶ್ರದ್ಧಾವಂತೋ ದಿವಂಗತಾಃ ॥** –ಗಾರುಡ

ಎಂದು ಗಾರುಡ ತಿಳಿಸಿದಂತೆ, ಧರ್ಮದ ಅನುಷ್ಠಾನಕ್ಕೆ ಶ್ರದ್ಧೆಯೇ ಮುಖ್ಯ ಹೊರತು, ಬಾಹ್ಯ ಐಶ್ವರ್ಯವಲ್ಲ. ನಿಷ್ಕಿಂಚನರಾದ ಮುನಿಗಳು ಶ್ರದ್ಧೆಯಿಂದಲೇ ಮೋಕ್ಷವನ್ನು ಹೊಂದಿದ್ದಾರೆ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

ಸ್ನಾನಮಾಡುವಾಗ ನಮ್ಮಲ್ಲಿದ್ದ ಕಲಿ ದೂರದಲ್ಲಿ ನಿಲ್ಲುತ್ತಾನೆ. ಸ್ನಾನದ ಅನಂತರ ಮೊದಲು ಯಾವ ಭಾಗದಲ್ಲಿ ಮೈ ಒರೆಸುತ್ತೇವೋ ಅಲ್ಲಿ ಪುನಃ ಕಲಿ ಬಂದು ಕೂತುಕೊಳ್ಳುತ್ತಾನೆ. ಆದ್ದರಿಂದ ಮೊದಲು ಬೆನ್ನನ್ನು ಒರೆಸಬೇಕು. ಕಲಿ ಯಾವಾಗಲೂ ನಮ್ಮ ಎದುರಿನಲ್ಲಿರಬಾರದು. ಹಿಂಬದಿಯಲ್ಲೇ ಇರಬೇಕು.

ಸ್ನಾನದನಂತರ ಒಣಗಿದ ಮಡಿವಸ್ತ್ರವನ್ನು ಷಟ್ಟುಚ್ಚ ಹಾಕಿ ಉಟ್ಟುಕೊಳ್ಳಬೇಕು.

**ಅಮಂಗಲಾನಿ ಸರ್ವಾಣಿ ಆರ್ದ್ರವಸ್ತ್ರಾಣಿ ಯಾನಿ ಚ ।**
**ತಸ್ಮಾತ್ ಸ್ಕಂಧೇ ಕ್ವಚಿದ್ಧೀಮಾನಾರ್ದ್ರವಸ್ತ್ರಂ ನ ಧಾರಯೇತ್ ॥** –ಸ್ಮೃ.

ಒದ್ದೆ ಬಟ್ಟೆಯು ಯಾವಾಗಲೂ ಅಮಂಗಲವಾದ್ದರಿಂದ ಅದನ್ನು ಉಡಲು ಅಥವಾ ಹಿಡಿಯಲು ಉಪಯೋಗಿಸಬಾರದು.

ಆಮೇಲೆ ಆಸನದಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತುಕೊಂಡು ಎರಡು ಸಲ ಶ್ರೌತಾಚಮನ ಮಾಡಿ, ನೀರಿನಿಂದ ದ್ವಾದಶನಾಮಗಳನ್ನು ಧರಿಸಿ, ಸುದರ್ಶನ ಅಥವಾ ಸಾಲಗ್ರಾಮಕ್ಕೆ,

**ಸಾಲಗ್ರಾಮಶಿಲಾಯಾಂ ತು ನಿತ್ಯಂ ಸನ್ನಿಹಿತಃ ಕಲಿಃ ।**
**ಭೀಮಸೇನಮಹಾಬಾಹೋ ಗದಯಾ ಪೋಥನಂ ಕುರು ॥**

ಎಂದು ಮೊದಲು ಅಭಿಷೇಕಮಾಡಿ ಆ ನೀರನ್ನು ತೆಗೆದು ಚೆಲ್ಲಿ ಎರಡುಸಲ ಅಂಭೃಣೀಸೂಕ್ತದಿಂದ

ಅಭಿಷೇಕಮಾಡಿ ಆ ತೀರ್ಥವನ್ನು ಮೂರುಸಲ ತೆಗೆದು ಕೊಂಡು, ಸ್ವಲ್ಪ ಶಿರಸ್ಸಿಗೆ ಹಾಕಿ ಆ ತೀರ್ಥದಿಂದಲೇ 'ಗೋಪೀಚಂದನ ಪಾಪಘ್ನ.....' ಎಂಬ ಮಂತ್ರದಿಂದ ಪ್ರದಕ್ಷಿಣಾಕಾರವಾಗಿ ಗೋಪೀಚಂದನವನ್ನು ತೇಯ್ದು ಕೇಶವಾದಿ ನಾಮಗಳಿಂದ 'ಲಲಾಟೇ ಕೇಶವಂ ವಿದ್ಯಾತ್....' ಎಂಬುದಾಗಿ ಹೇಳಿರುವ ಪ್ರಕಾರ ೧೨ ಸ್ಥಾನಗಳಲ್ಲಿ ಗೋಪೀಚಂದನ ಧಾರಣಮಾಡಿ, 'ಸುದರ್ಶನ ಮಹಾಜ್ವಾಲ....' ಇತ್ಯಾದಿ ಶ್ಲೋಕಗಳನ್ನು ಪಠನಮಾಡುತ್ತಾ ಆಯಾ ಮುದ್ರೆಗಳನ್ನು (ಪಂಚಮುದ್ರೆಗಳನ್ನು) ಆಯಾ ಸ್ಥಾನಗಳಲ್ಲಿ ಹಚ್ಚಿಕೊಳ್ಳಬೇಕು.

**ಯಜ್ಞೋ ದಾನಂ ತಪೋ ಹೋಮಃ ಶ್ರಾದ್ಧಂ ಸ್ವಾಧ್ಯಾಯತರ್ಪಣಮ್ ।**
**ಭಸ್ಮೀ ಭವತಿ ತತ್ಸರ್ವಂ ಊರ್ಧ್ವಪುಂಡ್ರಂ ವಿನಾ ಕೃತಮ್ ॥** –ಸ್ಮೃ.ರ

ಊರ್ಧ್ವಪುಂಡ್ರಧಾರಣ ಮಾಡದೆ ಮಾಡಿದ ಯಜ್ಞ, ದಾನ, ತಪಸ್ಸು, ಹೋಮ, ಶ್ರಾದ್ಧ ಇತ್ಯಾದಿಗಳು ಭಸ್ಮೀಭೂತವಾಗುತ್ತವೆ. ಆದ್ದರಿಂದ,

**ಧೃತೋರ್ಧ್ವಪುಂಡ್ರ ದೇಹಸ್ತು ಸಂಧ್ಯೋಪಾಸನಮಾಚರೇತ್ ।**
**ಉಪಾಸೀತ ದ್ವಿಜಃ ಸಂಧ್ಯಾಂ ಪ್ರಾಙ್ಮುಖೋದಙ್ಮುಖೋऽಪಿ ವಾ ॥** –ಸ್ಮೃ.ರ.

ಗೋಪೀಚಂದನದಿಂದ ಊರ್ಧ್ವಪುಂಡ್ರ (ದ್ವಾದಶನಾಮಗಳನ್ನು) ಹಾಕಿಕೊಳ್ಳದೆ ಮಾಡಿದ ಯಜ್ಞ, ದಾನ, ಜಪ, ಹೋಮ (ದೇವಪೂಜೆ, ಔಪಾಸನ, ವೈಶ್ವದೇವ), ಶ್ರಾದ್ಧ, ವೇದಾಧ್ಯಯನ, ತರ್ಪಣಗಳೆಲ್ಲವೂ ನಾಶವಾಗುತ್ತವೆ. ಗೋಪೀಚಂದನದಿಂದ ದ್ವಾದಶನಾಮಗಳನ್ನು ಧರಿಸಿಕೊಂಡು ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ಕೊಂಡು ಸಂಧ್ಯಾವಂದನಾದಿ ಸರ್ವಕರ್ಮಗಳನ್ನೂ ಮಾಡಬೇಕು.

**ಗೋಪೀಚಂದನಲಿಪ್ತಾಂಗೋ ಯಂ ಯಂ ಪಶ್ಯತಿ ಚಕ್ಷುಷಾ ।**
**ತಂ ತಂ ಶುದ್ಧಂ ವಿಜಾನೀಯಾತ್ ನಾತ್ರ ಕಾರ್ಯಾ ವಿಚಾರಣಾ ॥** –ಕೃ.ಮ.

ಗೋಪೀಚಂದನದಿಂದ ಅಂಕಿತರಾದ ಜನರು ತಮ್ಮ ಕಣ್ಣುಗಳಿಂದ ಯಾರನ್ನೆಲ್ಲ ನೋಡುವರೋ ಅವರೆಲ್ಲಾ ಶುದ್ಧರಾಗುತ್ತಾರೆ.

**ಊರ್ಧ್ವಪುಂಡ್ರವಿಹೀನಸ್ಯ ಶ್ಮಶಾನಸದೃಶಂ ಮುಖಮ್ ।**
**ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ॥** –ಕೃ.ಮ.

ಊರ್ಧ್ವಪುಂಡ್ರವಿಲ್ಲದ ಮಸಣದಂತಹ ಮುಖವನ್ನು ಕಂಡರೆ ಆ ಪಾಪವನ್ನು ತೊಡೆದುಹಾಕಲು ಸೂರ್ಯನನ್ನು ನೋಡಬೇಕು.

**ವಿನಾ ಮಂತ್ರಂ ಜಪಂ ಮೌನೀ ಹ್ಯಂತರ್ಜಾನುಕರಃ ಸದಾ ।**
**ಪವಿತ್ರೀ ಪ್ರಾಙ್ಮುಖಾಸೀನಃ ಕುರ್ಯಾತ್ಕರ್ಮೋತ್ತರೀಯವಾನ್ ॥** –ಗೃ.ಕ.ಸ.

ಪ್ರತಿಯೊಂದು ಕರ್ಮ ಮಾಡುವಾಗಲೂ ಮಂತ್ರ ಹೇಳುವುದಲ್ಲದೆ, ಇತರ ಸಮಯದಲ್ಲಿ ಮೌನದಿಂದ ಇದ್ದು ಎರಡು ಮೊಣಗಂಟುಗಳ ಮಧ್ಯದಲ್ಲಿ ಕೈ ಇಟ್ಟುಕೊಂಡು ಪವಿತ್ರ (ದರ್ಭೆಯ ಅಥವಾ ಚಿನ್ನದ) ಧರಿಸಿ, ಉತ್ತರೀಯ ಹಾಕಿಕೊಂಡು ಪೂರ್ವ ಅಥವಾ ಉತ್ತರಾಭಿಮುಖನಾಗಿ ಕುಳಿತುಕೊಂಡು ಸತ್ಕರ್ಮಗಳನ್ನು ಮಾಡಬೇಕು.

**ಸ್ನಾಸ್ಯತೋ ವರುಣಃ ಕಾಂತಿಂ ಜುಹ್ವತೋऽಗ್ನಿಃ ಶ್ರಿಯಂ ಹರೇತ್ ।**
**ಭುಂಜತೋ ಮೃತ್ಯುರಾಯುಷ್ಯಂ ತಸ್ಮಾನ್ಮೌನಂ ತ್ರಿಷು ಸ್ಮೃತಮ್ ॥** –ಸ್ಮೃ.ರ.

ಸ್ನಾನ ಮಾಡುವಾಗ ಮಾತಾಡಿದರೆ ವರುಣನು ಕಾಂತಿಯನ್ನೂ, ಹೋಮ ಮಾಡುವಾಗ (ಪೂಜಾಕಾಲದಲ್ಲಿಯೂ) ಅಗ್ನಿಯು ಸಂಪತ್ತನ್ನೂ, ಊಟ ಮಾಡುವಾಗ ಮೃತ್ಯುವು ಆಯುಷ್ಯವನ್ನೂ ಅಪಹರಿಸುವನು.

## ಪ್ರಾತಃಸಂಧ್ಯಾರ್ಘ್ಯವಿಧಿಃ

**ವಸಿತ್ವಾ ವಾಸ ಆಚಮ್ಯ ಪ್ರೋಕ್ಷ್ಯಾಚಮ್ಯ ಚ ಮಂತ್ರತಃ ।**
**ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಮ್ ॥**

**ಮಂತ್ರತಃ ಪರಿವೃತ್ಯಾಥ ಸಮಾಚಮ್ಯ ಸುರಾದಿಕಾನ್ ।**
**ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸೃತ್ಯ ಚಾಂಜಸಾ ॥** –ಸ.ಸ್ಮೃ.

ಸ್ನಾನದನಂತರ ಮೈಒರಸಿದ ಮೇಲೆ ಒಣಗಿದ ಮಡಿಬಟ್ಟೆಯನ್ನುಟ್ಟು ಆಚಮನ ಮಾಡಿ ಗೋಪಿಯಿಂದ ಊರ್ಧ್ವಪುಂಡ್ರಾದಿಗಳನ್ನು ಧರಿಸಿ, ಆಚಮನ ಮಾಡಿ ಸಂಧ್ಯಾವಂದನೆಗೆ ಮೊದಲು ಪ್ರಾಣಾಯಾಮವನ್ನು ಮಾಡಬೇಕು.

**ಪ್ರಾಣೋ ದೇಹಗತೋ ವಾಯುರಾಯಾಮಸ್ತನ್ನಿಬಂಧನಮ್ ।** –ಸಂ.ಭಾ.

ದೇಹದೊಳಗಿರುವ ವಾಯುವನ್ನು ಬಿಗಿಹಿಡಿದು ತನ್ನ ಅಧೀನದಲ್ಲಿಟ್ಟುಕೊಳ್ಳುವುದಕ್ಕೆ ಪ್ರಾಣಾಯಾಮ ಎಂದು ಹೆಸರು.

**ಕನಿಷ್ಠಾಽನಾಮಿಕಾಂಗುಷ್ಠೈರ್ನಾಸಿಕಾಗ್ರಸ್ಯ ಪೀಡನಮ್ ।**
**ಓಂಕಾರಮುದ್ರಾ ಸಾ ಪ್ರೋಕ್ತಾ ಯತೇಶ್ಚ ಬ್ರಹ್ಮಚಾರಿಣಃ ॥**

**ಪಂಚಾಂಗುಲಿಭಿರ್ನಾಸಾಗ್ರಪೀಡನಂ ಪ್ರಣವಾಭಿಧಾ ।**
**ಮುದ್ರೇಯಂ ಸರ್ವಪಾಪಘ್ನಾ ವಾನಪ್ರಸ್ಥಗೃಹಸ್ಥಯೋಃ ॥** –ಸಂ.ಭಾ.

ಮೂಗಿನ ತುದಿಯನ್ನು ಎಡಬದಿಯಲ್ಲಿ ಕನಿಷ್ಠಿಕಾ ಅನಾಮಿಕಾಬೆರಳುಗಳಿಂದ, ಬಲತುದಿಯಲ್ಲಿ ಅಂಗುಷ್ಠದಿಂದ ಒತ್ತಿಹಿಡಿಯುವುದು ಓಂಕಾರಮುದ್ರೆ, ಯತಿಗಳೂ, ಬ್ರಹ್ಮಚಾರಿಗಳೂ ಇದನ್ನು ಮಾಡಬೇಕು. ಐದು ಬೆರಳುಗಳಿಂದ ಮೂಗನ್ನು ಗಟ್ಟಿಯಾಗಿ ಹಿಡಿಯುವುದೇ ಪ್ರಣವಮುದ್ರೆ, ಇದು ಗೃಹಸ್ಥಾಶ್ರಮಿಗೂ ವಾನಪ್ರಸ್ಥನಿಗೂ ಹೇಳಿದೆ.

**ರೇಚಯಿತ್ವಾ ದಕ್ಷಿಣತಃ ಪೂರಯಿತ್ವಾ ಚ ವಾಮತಃ ।**
**ಕುಂಭಕಂ ಚ ಸುಷುಮ್ನಾಯಾಂ ವಿಷ್ಣುಂ ವಾಯುಂ ಚ ಸಂಸ್ಮರೇತ್ ॥** –ತಂ.ಸಾ.ಸಂ.

ಬಲಭಾಗದಲ್ಲಿ ಪಿಂಗಲಾನಾಡಿಯಿಂದ ವಾಯುವನ್ನು ಹೊರಚೆಲ್ಲಿ, ಎಡಭಾಗದಲ್ಲಿರುವ ಇಡಾನಾಡಿಯಿಂದ ಒಳಗೆಳೆದುಕೊಂಡು, ಮಧ್ಯದಲ್ಲಿರುವ ಸುಷುಮ್ನಾ ನಾಡಿಯಲ್ಲಿ ವಾಯುವನ್ನು ಸ್ಥಗಿತಗೊಳಿಸಿ ಶ್ರೀಹರಿವಾಯುಗಳನ್ನು ಸ್ಮರಿಸಬೇಕು.

**ದ್ವಿಗುಣೋತ್ತರಂ ರೇಚಕಾದಿ ಷೋಡಶಾದಿಕ್ರಮೇಣ ತು ।**
**ಮಾತ್ರಾಣಾಂ ಹ್ರಸ್ವವರ್ಣಸ್ಯ ಕಾಲೋ ಮಾತ್ರೇತಿ ಶಬ್ದ್ಯತೇ ॥**
**ರೇಚಯೇದ್ದಕ್ಷಿಣೇ ವಿದ್ವಾನ್ ಮಾತ್ರಾಷೋಡಶಕೇವ ಚ ॥** –ತಂ.ಸಾ.ಸಂ.

೧೬ ಮಾತ್ರೆಗಳಷ್ಟು ಕಾಲ ರೇಚಕ. ೩೨ ಮಾತ್ರೆಗಳಷ್ಟು ಕಾಲಪೂರಕ. ೬೪ ಮಾತ್ರೆಗಳಷ್ಟು ಕಾಲ ಕುಂಭಕ. ಹೀಗೆ ಎರಡೆರಡು ಕಾಲ ರೇಚಕಾದಿಗಳನ್ನು ಹೆಚ್ಚಿಸುತ್ತಾ ಬರಬೇಕು. ಒಂದು ಹ್ರಸ್ವವರ್ಣವನ್ನು ಉಚ್ಚರಿಸಲು ಬೇಕಾದುವಷ್ಟು ಕಾಲಕ್ಕೆ ಮಾತ್ರೆಯೆಂದು ಹೆಸರು.

**ಭೂಃ ಭವಃ ಸುವಃ ಮಹಃ ಜನಃ ತಪಃ ಸತ್ಯಂ ತಥೈವ ಚ ।**
**ಪ್ರತ್ಯೋಂಕಾರಸಮಾಯುಕ್ತಂ ತಥಾ ತತ್ಸವಿತುಃ ಪದ ॥**

**ಓಮಾಪೋಜ್ಯೋತೀರಿತ್ಯೇತಚ್ಛಿರಃ ಪಶ್ಚಾತ್ಪ್ರಯೋಜಯೇತ್ ।**
**ತ್ರಿರಾವರ್ತನಯೋಗಾತ್ತು ಪ್ರಾಣಾಯಾಮಸ್ತು ಶಬ್ದ್ಯತೇ ॥** –ಸಂ. ಭಾ.

ಓಂಕಾರಸಹಿತ ಮಹಾವ್ಯಾಹೃತಿ ಗಾಯತ್ರೀ ಶಿರೋಮಂತ್ರಗಳನ್ನು ಅದರ ಅರ್ಥಾನುಸಂಧಾನಪೂರ್ವಕ ಮೂರಾವರ್ತಿ ಮನಸ್ಸಿನಲ್ಲೇ ಹೇಳಿದಾಗ ಒಂದು ಪ್ರಾಣಾಯಾಮ ಆಗುತ್ತದೆ. ಸಂಧ್ಯಾವಂದನದ ಪ್ರಾರಂಭದಲ್ಲಿ ಮೇಲೆ ತಿಳಿಸಿರುವಂತೆ ಮೂರುಸಲವೂ, ಸೂರ್ಯಾರ್ಘ್ಯಪ್ರದಾನದ ಮೊದಲು ಒಂದು ಸಲವೂ, ಗಾಯತ್ರೀಮಂತ್ರಜಪದ ಆದ್ಯಂತಗಳಲ್ಲಿ ಮೂರುಸಲವೂ ಪ್ರಾಣಾಯಾಮವನ್ನು ಮಾಡಬೇಕು. ಹೀಗೆ ಮೂರಾವರ್ತಿಯ ಅನಂತರ ಎಡಮೂಗನ್ನು ಗಟ್ಟಿಯಾಗಿ ಹಿಡಿದು ಬಲಮೂಗಿನಿಂದ ಒಳಗಿರುವ ವಾಯುವನ್ನು ನಿಧಾನವಾಗಿ ಹೊರಗೆ ಬಿಡಬೇಕು.

**ಕ್ರಮೇಣೈವಾಭ್ಯಸೇನ್ಮಾತ್ರಾ ವೃದ್ಧಿಮೇಕಾಗ್ರಧೀಃ ಪುನಃ ।** –ತಂ.ಸಾ.ಸಂ.

ಏಕಾಗ್ರಮನಸ್ಕನಾಗಿ ಅಭ್ಯಾಸಬಲದಿಂದ ಇನ್ನೂ ಹೆಚ್ಚು ಕಾಲ ಪ್ರಾಣಾಯಾಮ ವನ್ನು ಮಾಡಲು ಅಭ್ಯಸಿಸಬೇಕು. ಹೀಗೆ ಮಾಡುವುದರಿಂದ ಸಕಲ ಪಾಪಪರಿಹಾರ ವಾಗುವುದಲ್ಲದೆ,

**ಋಷಯೋ ದೀರ್ಘಸಂಧ್ಯತ್ವಾದ್ದೀರ್ಘಮಾಯುರವಾಪ್ನುವನ್ ।** –ಮ.ಸ್ಮೃ.

ಋಷಿಗಳು ಈ ಪ್ರಾಣಾಯಾಮವನ್ನು ದೀರ್ಘಕಾಲ ಮಾಡುವುದರಿಂದ ದೀರ್ಘಾಯುಷ್ಯವನ್ನು ಹೊಂದಿರುವರು.

**ಪ್ರಜ್ಞಾಂ ಯಶಶ್ಚ ಕೀರ್ತಿಂ ಚ ಬ್ರಹ್ಮವರ್ಚಸಮೇವ ಚ ।** –ವಸು.ಸ್ಮೃ.

ದೀರ್ಘಕಾಲದ ಪ್ರಾಣಾಯಾಮ, ಗಾಯತ್ರೀಮಂತ್ರಜಪದಿಂದ ಋಷಿಗಳು ಪ್ರಜ್ಞಾಶಕ್ತಿ, ಯಶಸ್ಸು, ಕೀರ್ತಿ ಹಾಗೂ ಬ್ರಹ್ಮವರ್ಚಸ್ಸು ಮೊದಲಾದವುಗಳನ್ನು ಗಳಿಸಿರುವರು.

ಆಮೇಲೆ ಸಂಕಲ್ಪ ಹೇಳಿ, 'ಆಪೋ ಹಿಷ್ಠಾ......' ಎಂಬ ಮಂತ್ರದ ೯ ಪಾದಗಳಿಂದ ೯ ಸ್ಥಳಗಳಿಗೆ ಎಡ ಕೈಯಲ್ಲಿ ಉದ್ಧರಣೆಯಿಂದ ನೀರು ಹಿಡಿದುಕೊಂಡು ಬಲಕೈಯಲ್ಲಿ ತುಳಸಿ ಹಿಡಿದು ಅದರಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು.

**ಭೂಮೌ ಶಿರಸಿ ಚಾಕಾಶೇ ಆಕಾಶೇ ಭುವಿ ಮಸ್ತಕೇ ।**
**ಮಸ್ತಕೇ ಚ ತಥಾಕಾಶೇ ಭೂಮೌ ಚ ನವಧಾ ಕ್ಷಿಪೇತ್ ॥**

೧. ಪಾದಕ್ಕೆ ೨. ಶಿರಸ್ಸಿಗೆ ೩. ಎದೆಗೆ ಪುನಃ ಎದೆಗೆ, ಪಾದಗಳಿಗೆ ಶಿರಸ್ಸಿಗೆ ಪುನಃ ಶಿರಸ್ಸಿಗೆ, ಎದೆಗೆ, ಪಾದಗಳಿಗೆ ಹೀಗೆ ೯ ಸ್ಥಳಗಳಿಗೆ ೯ ಪಾದಗಳ ಮಂತ್ರಗಳಿಂದ ಪ್ರೋಕ್ಷಿಸಿಕೊಳ್ಳಬೇಕು. ಹೀಗೆ ಪ್ರೋಕ್ಷಿಸುವುದರಿಂದ,

**ರಜಸ್ತಮೋಮೋಹಜಾಲಾನ್ ಜಾಗ್ರತ್ ಸ್ವಪ್ನಸುಷುಪ್ತಿಗಾನ್ ।**
**ವಾಙ್ಮನಃ ಕಾಯಜಾನ್ ದೋಷಾನ್ ನವೈತಾನ್ ನವಭಿರ್ದಹೇತ್ ॥** –ಸ್ಮೃ.ರ.

ರಜೋಗುಣ, ತಮೋಗುಣ, ಮೋಹಗಳಿಂದ ಎಚ್ಚರಿಕೆಯಲ್ಲಿ, ಸ್ವಪ್ನದಲ್ಲಿ, ನಿದ್ರಾಕಾಲದಲ್ಲಿ ಮಾತಿನಿಂದ, ಮನಸ್ಸಿನಿಂದ, ಶರೀರದಿಂದ ಮಾಡಿದ ಸಮಸ್ತ ಪಾಪಗಳೂ ಈ ೯ ಪಾದಮಂತ್ರದಿಂದ ೯ ಸ್ಥಳಗಳಿಗೆ ಪ್ರೋಕ್ಷಣೆ ಮಾಡುವುದರಿಂದ ಪರಿಹಾರವಾಗುತ್ತವೆ.

'ಅಗ್ನಿಶ್ಚ (ಸೂರ್ಯಶ್ಚ) ಮಾಮನ್ಯುಶ್ಚ ...... ಸತ್ಯೇ(ಸೂರ್ಯೇ) ಜ್ಯೋತಿಷಿ ಜುಹೋಮಿ ಸ್ವಾಹಾ' ಎಂದು ಮಂತ್ರಾಚಮನ ಮಾಡಿ ಪುನಃ ಎರಡು ಸಲ ಆಚಮನ ಮಾಡಬೇಕು. ಈ ಮಂತ್ರದ ಅರ್ಥ ಸ್ಪಷ್ಟ, ಅರ್ಥಾನು-

ಸಂಧಾನಪೂರ್ವಕ ಮಂತ್ರಾಚಮನ ಮಾಡಿದಾಗ, ಹಗಲು ರಾತ್ರಿಯಲ್ಲಿ ತ್ರಿಕರಣ, ಉದರ, ಗುಹ್ಯೇಂದ್ರಿಯ, ಪಾಣಿ, ಪಾದಗಳಿಂದ ಮಾಡಿದ ಪಾಪಗಳೆಲ್ಲಾ ಪರಿಹಾರವಾಗುತ್ತವೆ. ಪುನಃ 'ದಧಿಕ್ರಾವ್ಣೋ....' 'ಆಪೋ ಹಿಷ್ಠಾ.....' ಇತ್ಯಾದಿ ಮಂತ್ರಗಳಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು.

ಸೂರ್ಯಾರ್ಘ್ಯಕ್ಕೆ ಸಂಕಲ್ಪಿಸಿ ಒಂದು ಸಲ ಪ್ರಾಣಾಯಾಮ ಮಾಡಿಕೊಂಡು, ನಂದಪ ಎಂಬ ದೈತ್ಯನು ದೈತ್ಯರ ಹಿತಕ್ಕಾಗಿ ನೀರಲ್ಲಿರುವನು. ಅವನ ನಾಶಕ್ಕಾಗಿ ನೀರಲ್ಲಿ ಕಿರುಬೆರಳಿನಿಂದ ತ್ರಿಕೋಣರೇಖೆ ಮಾಡಿ ಮೂರು ಬದಿಗಳಲ್ಲಿ 'ಓಂ ಭೂಃ, ಓಂ ಭುವಃ, ಓಂ ಸುವಃ' ಎಂದೂ ಮಧ್ಯದಲ್ಲಿ 'ಓಂ ಹ್ರೀಂ' ಎಂದೂ ಬರೆದು ನಿಂತುಕೊಂಡು ಎರಡು ಕೈಗಳನ್ನೂ ಜೋಡಿಸಿ ಎರಡು ಅಂಗುಷ್ಠಗಳನ್ನು ಬೇರ್ಪಡಿಸಿ,

**ಅಂಗುಷ್ಠತರ್ಜನೀಯೋಗಾತ್ ರಾಕ್ಷಸೀಮುದ್ರಿಕಾ ಭವೇತ್ ।**
**ರಾಕ್ಷಸೀಮುದ್ರಿಕಾತೋಯಂ ತತ್ತೋಯಂ ರುಧಿರಂ ಭವೇತ್ ॥** –ಸ್ಮೃ.ರ.

ಅಂಜಲಿಯ ಆಚೆ ಈಚೆ ಬದಿಯಲ್ಲಿರುವ ಅಂಗುಷ್ಠ ತೋರ್ಬೆರಳಿಗೆ ಮುಟ್ಟಿದಾಗ ರಾಕ್ಷಸೀಮುದ್ರೆ ಆಗುತ್ತದೆ. ರಾಕ್ಷಸೀಮುದ್ರೆಯಿಂದ ಕೊಟ್ಟ ನೀರು ರಕ್ತಕ್ಕೆ ಸಮವಾಗುತ್ತದೆ. ಆದ್ದರಿಂದ ರಾಕ್ಷಸೀಮುದ್ರೆಯಿಂದ ಅರ್ಘ್ಯ ಕೊಡಬಾರದು. ಈ ಸಂಧ್ಯಾಂಗ ಕೊಡುವ ಅರ್ಘ್ಯವನ್ನು,

**ತಿಷ್ಠನ್ನರ್ಘ್ಯತ್ರಯಂ ದದ್ಯಾತ್ ತ್ರಿಷು ಕಾಲೇಷು ಬಹ್ವೃಚಃ ॥** –ಸ್ಮೃ.

ಋಗ್ವೇದಿಗಳು ತ್ರಿಕಾಲಗಳಲ್ಲಿಯೂ ನಿಂತುಕೊಂಡೇ ಪೂರ್ವಾಭಿಮುಖವಾಗಿ ಅರ್ಘ್ಯ ಕೊಡಬೇಕು.

**ಪ್ರಾತರ್ಮಧ್ಯಾಹ್ನಯೋಸ್ತಿಷ್ಠನ್ ಸಾಯಮಾಸೀನ ಏವ ತು ॥** –ಸ್ಮೃ.

ಯಜುರ್ವೇದಿಗಳೂ ಪ್ರಾತಃ ಸಂಧ್ಯಾವಂದನೆಯಲ್ಲಿ ಮತ್ತು ಮಧ್ಯಾಹ್ನ ಸಂಧ್ಯಾವಂದನೆಯಲ್ಲಿ ನಿಂತುಕೊಂಡು ಪೂರ್ವಾಭಿಮುಖವಾಗಿ ಅರ್ಘ್ಯವನ್ನು ಕೊಡಬೇಕು. ಸಾಯಂಸಂಧ್ಯಾವಂದನೆಯಲ್ಲಿ ಕುಳಿತುಕೊಂಡು ಅರ್ಘ್ಯ ಕೊಡಬೇಕು.

ಈ ಅರ್ಘ್ಯವನ್ನು ಬೆಳಗ್ಗೆ ಅರ್ಧ ಬಗ್ಗಿ ನಿಂತುಕೊಂಡು ಮೇಲಕ್ಕೆ ಹಾರಿಸಿ ನೀರಿಗೆ ಬಿಡಬೇಕು. ಮಧ್ಯಾಹ್ನ ಸರಿಯಾಗಿ ನಿಂತುಕೊಂಡು ಎದುರಿಗೆ ನೀರಿಗೆ ಬಿಡಬೇಕು. ಸಾಯಂಕಾಲ ಯಜುರ್ವೇದಿಗಳಂತೂ ಕುಳಿತುಕೊಂಡು, ಋಗ್ವೇದಿಗಳು ಪಶ್ಚಿಮಾಭಿಮುಖವಾಗಿ ನಿಂತುಕೊಂಡು ನೆಲಕ್ಕೆ ಅಥವಾ ಕಲ್ಲಿನ ಮೇಲೆ ಬಿಡಬೇಕು. ಅರ್ಘ್ಯ ಕೊಡುವಾಗ ಸೂರ್ಯಮಂಡಲಾಂತರ್ಗತ ಶ್ರೀನಾರಾಯಣನನ್ನು ಧ್ಯಾನಿಸುತ್ತಾ ಗಾಯತ್ರೀಮಂತ್ರವನ್ನು ಚೆನ್ನಾಗಿ ಉಚ್ಚರಿಸಿ ಮೂರುಸಲ ಬಿಡಬೇಕು. ಮೊದಲ ಅರ್ಘ್ಯದಿಂದ ಮಂದೇಹ ಎಂಬ ದೈತ್ಯರ ಅಸ್ತ್ರನಾಶವೂ, ಎರಡನೆಯದರಿಂದ ಅವರ ವಾಹನನಾಶವೂ, ಮೂರನೆಯದರಿಂದ ಆ ದೈತ್ಯರ ನಾಶವೂ ಆಗುತ್ತದೆ. ಆಮೇಲೆ ಪ್ರಾಯಶ್ಚಿತ್ತಾರ್ಘ್ಯ ಕೊಡಬೇಕು. ಆಮೇಲೆ 'ಓಮ್ ಅಸಾವಾದಿತ್ಯೋ ಬ್ರಹ್ಮ' 'ಓಮಾಪೋಜ್ಯೋತೀರಸೋಽಮೃತಂ ಬ್ರಹ್ಮಭೂರ್ಭುವಸ್ಸುವರೋತಮ್' ಎಂದು ಕೈಯಲ್ಲಿ ನೀರು ಹಿಡಿದುಕೊಂಡು ಪ್ರದಕ್ಷಿಣೆ ಬಂದು ನೀರನ್ನು ಕೆಳಗೆ ಬಿಡಬೇಕು. ಇದರಿಂದ ದೈತ್ಯಹತ್ಯಾದೋಷ ಪರಿಹಾರವಾಗುತ್ತದೆ. ಈ ಮೂರು ಅರ್ಘ್ಯಗಳಿಂದ ಮಂದೇಹ ದೈತ್ಯರ ನಾಶವಾಯಿತು ಎಂದು ತಿಳಿಯಬೇಕು. ಈ ಹತ್ಯಾದೋಷನಿವೃತ್ತಿಗೆ ಮೂರು ಸಲ ಶ್ರೌತಾಚಮನ ಮಾಡಬೇಕು. ಬ್ರಹ್ಮಾದಿದೇವತೆಗಳಿಗೆ ಮೂಲಕಾರಣನಾದ ಶ್ರೀವಿಷ್ಣುವಿಗೆ ಶುಕ್ಲಪಕ್ಷದಲ್ಲಿ ಕೇಶವಾದಿ ೧೨ ನಾಮಗಳಿಂದಲೂ, ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿ ೧೨ ನಾಮಗಳಿಂದಲೂ ತರ್ಪಣ ಕೊಡಬೇಕು. ಇಲ್ಲಿಗೆ ಸಂಧ್ಯಾವಂದನೆಯನ್ನು ಕೃಷ್ಣಾರ್ಪಣ ಬಿಡಬೇಕು.

ಆಮೇಲೆ ಮೊದಲು ತೆಗೆದಿಟ್ಟ, ಒದ್ದೆಯಾದ ಸ್ನಾನದ ವಸ್ತ್ರವನ್ನು ಪ್ರೋಕ್ಷಿಸಿ, ಹಿಂಡಿ, ಪಿತೃತರ್ಪಣಾಧಿಕಾರಿಗಳು–

**ಯೇ ಕೇ ಚಾಸ್ಮತ್ ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।**
**ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಮ್ ॥**

ಎಂಬ ಮಂತ್ರದಿಂದ ವಸ್ತ್ರನಿಷ್ಪೀಡನದ ಉದಕವನ್ನು ಪಿತೃಗಳಿಗೆ ಕೊಟ್ಟು ಆ ವಸ್ತ್ರವನ್ನು ಬಿಡಿಸಿ ಚೆನ್ನಾಗಿ ತೊಳೆದು ಒಣಹಾಕಿ ಮತ್ತೆ ಜಪ ಮಾಡಬೇಕು.

ಮೊದಲು ಆಸನಶುದ್ಧಿ, ಪಾಪಪುರುಷಧ್ಯಾನ ಮಾಡಿಕೊಂಡು, ಪ್ರಾಣಾಯಾಮ. ಋಗ್ವೇದಿಗಳು ಲೋಕನ್ಯಾಸ 'ಗಳನ್ನು ಮಾಡಿ (ಉಪದೇಶ ಇದ್ದವರು) ತತ್ವನ್ಯಾಸ, ಮಾತೃಕಾನ್ಯಾಸ ಮಾಡಿ, ಗಾಯತ್ರೀಮಂತ್ರದ ಜಪವನ್ನು ಮಾಡಬೇಕು. ಮೂರು ಸಲ ಪ್ರಾಣಾಯಾಮ ಮಾಡಿ, ಗಾಯತ್ರಿಯ ಋಷಿ ಛಂದೋದೇವತಾ ಹೇಳಿ, ಕರನ್ಯಾಸ ಷಡಂಗನ್ಯಾಸ ಮಾಡಿ ಧ್ಯಾನ ಹೇಳಿ 'ಗಾಯತ್ರೀಮಂತ್ರಜಪಂ ಕರಿಷ್ಯೇ' ಎಂದು ಸಂಕಲ್ಪಿಸಿ, ಗಾಯತ್ರೀ ಮಂತ್ರಜಪ ಮಾಡಬೇಕು.

**ಋಷಿರ್ಗುರುತ್ವಾತ್ ಶಿರಸಿ, ಛಂದೋಽಕ್ಷರತ್ವಾನ್ಮುಖೇ ಧ್ಯೇಯತ್ವಾತ್ ಹೃದಿ ದೇವತಾ ।**–ಸಂ.ಧಾ.

ಋಷಿಗಳು ಗುರುಗಳಾದ್ದರಿಂದ ಅವರನ್ನು ಹೇಳುವಾಗ ಕೈಯನ್ನು ತಲೆಯಲ್ಲಿಯೂ, ಛಂದಸ್ಸು ಅಕ್ಷರಗಳ ಸಂಖೆಯಲ್ಲಿ ಬರುವುದರಿಂದ ಇದನ್ನು ಹೇಳುವಾಗ ಬಾಯಿಯನ್ನೂ, ಧ್ಯಾನಮಾಡುವುದು ಹೃದಯಲ್ಲಾದ್ದರಿಂದ ದೇವತೆಯನ್ನು ಹೇಳುವಾಗ ಹೃದಯವನ್ನೂ ಮುಟ್ಟಕೊಳ್ಳಬೇಕು.

**ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್ ।**
**ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್ ॥** –ಸ.ಸ್ಮೃ.

ಸೂರ್ಯಮಂಡಲದ ಮಧ್ಯದಲ್ಲಿರುವ ನಾರಾಯಣನನ್ನೇ ಧ್ಯಾನಿಸುತ್ತಾ ದೇವರ ಸ್ವರೂಪವನ್ನು ಬೋಧಿಸುವ, ಮೂರು ಪಾದಗಳುಳ್ಳ, ಗಾಯತ್ರಿಯನ್ನು ಜಪಿಸಬೇಕು. ಇದನ್ನು ಒಂದುಸಾವಿರ ಬಾರಿ ಜಪಿಸುವುದು ಉತ್ತಮ. ನೂರು ಮಧ್ಯಮ. ಹತ್ತು ಅಧಮ.

**ವಿಶ್ವಾಮಿತ್ರಸ್ತು ಸಂಧ್ಯಾರ್ಥೇ ತದನ್ಯತ್ರ ಪ್ರಜಾಪತಿಃ ।** –ತಂ.ಸಾ.ಸಂ.

ಪ್ರಣವ, ವ್ಯಾಹೃತಿ, ಗಾಯತ್ರಿಯ ಮೂರು ಪಾದ ಸೇರಿದರೆ ವಿಶ್ವಾಮಿತ್ರಗಾಯತ್ರೀ; ಸಂಧ್ಯಾವಂದನೆಯಲ್ಲಿ ಇದನ್ನೇ ಜಪಿಸಬೇಕು. ವ್ಯಾಹೃತಿರಹಿತವಾದ ಪ್ರಣವ ಮತ್ತು ಗಾಯತ್ರೀ ಸೇರಿದರೆ ಬ್ರಹ್ಮಗಾಯತ್ರೀ ಆಗುತ್ತದೆ. ಎಲ್ಲಾ ಪ್ರಾಯಶ್ಚಿತ್ತಗಳಿಗೂ ಈ ಬ್ರಹ್ಮಗಾಯತ್ರಿಯನ್ನೇ ಜಪಿಸಬೇಕು.

**ಪಂಚವಸಾನಾ ಗಾಯತ್ರೀ ಪಂಚಪಾತಕನಾಶಿನೀ ।**
**ಪಂಚವಸಾನರಹಿತಾ ಪಂಚಪಾತಕದಾಯಿನೀ ॥**

ಪ್ರಣವ, ವ್ಯಾಹೃತಿ, ಗಾಯತ್ರಿಯ ಮೂರು ಪಾದಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಜಪಿಸಿದರೆ ಬ್ರಹ್ಮಾದಿ ಪಂಚಮಹಾಪಾತಕಗಳು ಪರಿಹಾರವಾಗುತ್ತವೆ. ಹೀಗೆ ಐದು ಕಡೆಯಲ್ಲಿ ನಿಲ್ಲಿಸದೆ ಜಪಿಸಿದರೆ ಪಂಚಪಾತಕಗಳನ್ನು ಕೊಡುತ್ತದೆ.

**ಗಾಯತ್ರೀಶಬ್ದಾರ್ಥ:**

**ಪ್ರತಿಗ್ರಹಾದನ್ನದೋಷಾತ್ ಪಾತಕಾದುಪಪಾತಕಾತ್ ।**
**ಗಾಯತಂ ತ್ರಾಯತೇ ಯಸ್ಮಾತ್ ಗಾಯತ್ರೀತಿ ಸ್ಮೃತಾ ಬುಧೈಃ ॥** –ಸ್ಮೃ.ರ.

ಯಾವ ಮಂತ್ರವು ಜಪಮಾಡುವವರ ಪ್ರತಿಗ್ರಹದೋಷವನ್ನು ಪರಿಹರಿಸುತ್ತದೆಯೋ ಅದು 'ಗಾಯತ್ರೀ'

ಎಂಬುದಾಗಿ ಜ್ಞಾನಿಗಳಿಂದ ಹೇಳಲ್ಪಟ್ಟಿದೆ. ಅದೂ ಅಲ್ಲದೆ, 'ನ ಗಾಯತ್ರ್ಯಾಃ ಪರೋ ಮಂತ್ರಃ'. ಈ ಗಾಯತ್ರೀ ಸಮಾನವಾದ ಇನ್ನೊಂದು ಮಂತ್ರ ಇಲ್ಲ. ಈ ಗಾಯತ್ರೀಮಂತ್ರವನ್ನು ಜಪಿಸುವಾಗ ಮೆಲ್ಲನೆ, ನಿಧಾನವಾಗಿ, ಇದರ ಧ್ಯಾನ ಶ್ಲೋಕದಲ್ಲಿ ಹೇಳಿರುವ ಈ ಮಂತ್ರಪ್ರತಿಪಾದ್ಯನಾದ ಸೂರ್ಯಮಂಡಲದ ಮಧ್ಯದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಶ್ರೀಮನ್ನಾರಾಯಣನನ್ನು ಧ್ಯಾನಿಸುತ್ತಾ ಅನುಸಂಧಾನಪೂರ್ವಕ ಜಪ ಮಾಡಬೇಕು.

**ಆಸೂರ್ಯದರ್ಶನಾತ್ತಿಷ್ಠೇತ್ತತಸ್ತೂಪವಿಶೇತ ವಾ ।** –ಸ.ಸ್ಮೃ.

ಈ ಗಾಯತ್ರೀಜಪವನ್ನು ಸೂರ್ಯೋದಯಕ್ಕೆ ಮುಂಚೆ ನಿಂತುಕೊಂಡೇ ಮಾಡಿ, ಸೂರ್ಯೋದಯದ ಅನಂತರ ಕುಳಿತುಕೊಂಡು ಮಾಡಬಹುದು.

**ಪ್ರಣವಃ ಪುರುಷೋ ಜ್ಞೇಯೋ ಗಾಯತ್ರೀವರವರ್ಣಿನೀ ।**
**ತಯೋಃ ಸಂಯೋಗಕಾಲೇ ತು ವಸ್ತ್ರೇಣಾಚ್ಛಾದಯೇತ್ಕರಮ್ ॥** –ಸಂ.ಧಾ.

ಇಲ್ಲಿ ಪ್ರಣವವು ಪುಲ್ಲಿಂಗ, ಗಾಯತ್ರೀಪದ ಸ್ತ್ರೀಲಿಂಗ. ಇವೆರಡರ ಸಂಯೋಗ ಕಾಲದಲ್ಲಿ ಗಣನೆ ಮಾಡುವುದನ್ನು ನೋಡಬಾರದಾದ್ದರಿಂದ ಜಪ ಮಾಡುವಾಗ ಕೈಯನ್ನು ವಸ್ತ್ರದಲ್ಲಿ ಮುಚ್ಚಿಕೊಳ್ಳಬೇಕು.

**ಅಸಂಖ್ಯಾತೋಽಪವಿತ್ರಶ್ಚ ಜಪೋ ನಿಷ್ಫಲತಾಮಿಯಾತ್ ।**

ಶುದ್ಧಿ ಇಲ್ಲದೆಯೂ, ಲೆಕ್ಕ ಮಾಡದೆಯೂ ಮಾಡುವ ಜಪ ನಿಷ್ಫಲವಾಗುತ್ತದೆ.

**ಜಪಕಾಲೇ ನ ಭಾಷೇತ ಹೋಮಾದಿಷು ಕದಾಚನ ।**
**ಸಂಖ್ಯೇಯ್ಯೈವೋಪವೀತೇನ ಜಪಹೋಮಾದಿನಿಷ್ಫಲಮ್ ॥** –ಸ್ಮೃ.ರ.

ಯಾವಾಗಲೂ ಜಪ ಮಾಡುವಾಗ, ಹೋಮ ಮಾಡುವಾಗ ಮಾತಾಡದೆ ಇದರ ಸಂಖ್ಯೆಯನ್ನು ಯಜ್ಞೋಪವೀತದಿಂದ ಲೆಕ್ಕ ಮಾಡದೆ ಮಾಡಬೇಕು. ಇದಕ್ಕೆ ವ್ಯತ್ಯಾಸವಾದರೆ ಜಪವೂ, ಹೋಮವೂ ನಿಷ್ಫಲ. ಈ ಮಂತ್ರವನ್ನು ಹೇಗೆ ಲೆಕ್ಕ ಮಾಡಬೇಕೆಂದರೆ,

**ಗಾಯತ್ರೀ ವೇದಮೂಲತ್ವಾದ್ ವೇದಃ ಪರ್ವಸು ಗೀಯತೇ ।**
**ಮಧ್ಯಾಂಗುಲೀದ್ವಯಂ ಮೇರುಸ್ತನ್ಮೇರುಂ ನಾತಿಲಂಘಯೇತ್ ॥** –ಸ್ಮೃ.ರ.

ಬಲಗೈಯ ಅನಾಮಿಕೆಯ ಮಧ್ಯಗಂಟಿನಿಂದ ಗಣನೆ ಪ್ರಾರಂಭಮಾಡಿ ಅದರ ಕೆಳಗಿನ ಪರ್ವ, ಕನಿಷ್ಠಿಕೆಯ ಕೆಳಗಿನಿಂದ ಮೂರು ಪರ್ವ, ಅನಾಮಿಕೆಯ ಮೇಲಿನ ಪರ್ವ, ಮಧ್ಯಾಂಗುಲಿಯ ಮೇಲಿನ ಪರ್ವ, ತರ್ಜನಿಯ ಮೇಲಿನಿಂದ ಕೆಳಗೆ ಮೂರು ಪರ್ವ ಹೀಗೆ ಗಣನೆ ಮಾಡಿದಾಗ ೧೦ ಸಂಖ್ಯೆಯಾಗುತ್ತದೆ. ಮಧ್ಯಾಂಗುಲಿಯ ಮಧ್ಯ ಮತ್ತು ಕೆಳಗಿನ ಎರಡು ಪರ್ವಗಳು ಮೇರುಸ್ಥಾನಗಳು. ಹೀಗೆ ಗಣನೆ ಮಾಡಿದಾಗ ಮೇರುವಿಗೆ ಪ್ರದಕ್ಷಿಣೆ ಬಂದ ಹಾಗಾಗುತ್ತದೆ. ಇದೇ ಪ್ರಕಾರ ಗಾಯತ್ರೀಮಂತ್ರ ಜಪಮಾಡುವಾಗ ಬಲಗೈಯಲ್ಲಿ ತುಳಸಿ ಹಿಡಿದುಕೊಂಡು ಜಪಮಾಡಿದ ಅನಂತರ, ಜಪಸಂಖ್ಯೆ ೧೦ಕ್ಕೆ ಒಂದರಂತೆ ಗಾಯತ್ರೀಮಂತ್ರ ಹೇಳಿ ಕೊನೆಗೆ 'ಓಂ ತರ್ಪಯಾಮಿ' ಎಂದೂ ಅಥವಾ 'ಸವಿತಾರಂ ತರ್ಪಯಾಮಿ' ಎಂದೂ ತರ್ಪಣವನ್ನು ಕೊಟ್ಟು ಪುನಃ ಧ್ಯಾನ, ಷಡಂಗನ್ಯಾಸ, ಕರನ್ಯಾಸ, ಋಷಿಛಂದೋದೇವತಾ ಹೇಳಿ ಮೂರುಸಲ ಪ್ರಾಣಾಯಾಮ ಮಾಡಿ ಈ ಗಾಯತ್ರೀಮಂತ್ರಜಪವನ್ನು ಕೃಷ್ಣಾರ್ಪಣ ಬಿಡಬೇಕು.

ಗುಣಪೂರ್ಣನಾಗಿರುವುದರಿಂದ, ಸೃಷ್ಟ್ಯಾದಿಕರ್ತನಾದ್ದರಿಂದ, ಎಲ್ಲರಿಗೂ ಆಶ್ರಯನಾದ್ದರಿಂದ, ಸರ್ವೋತ್ತಮನೂ ಆಗಿರುವುದರಿಂದ, ಸಕಲ ಜಗತ್ತನ್ನು ಧರಿಸುವುದರಿಂದ, ಪ್ರಕಾಶ–ಸುಖ–ಜ್ಞಾನಸ್ವರೂಪನಾಗಿರು

ವುದರಿಂದ, ಎಲ್ಲರ ಬುದ್ಧಿಗಳನ್ನೂ ಪ್ರೇರಣೆ ಮಾಡುವುದರಿಂದ, ಎಲ್ಲ ಜನರೂ ಅವನನ್ನೇ ಧ್ಯಾನಿಸಬೇಕು. ಇದೇ ಗಾಯತ್ರೀಮಂತ್ರಾರ್ಥ. ಈ ಸಂಧ್ಯಾವಂದನೆಯನ್ನು,

**ಪೂರ್ವಾಂ ಸಂಧ್ಯಾಂ ಸನಕ್ಷತ್ರಾಂ ಉತ್ತರಾಂ ಸದಿವಾಕರಾಮ್ ।**
**ಉತ್ತರಾಮುಪವಿಶ್ಯೈವ ವಾಗ್ಯತಃ ಸರ್ವದಾ ಜಪೇತ್ ॥** –ಸಂ.ಸ್ಮೃ.

ಪ್ರಾತಃಕಾಲದ ಸಂಧ್ಯಾವಂದನೆಯನ್ನು ಸೂರ್ಯೋದಯಕ್ಕೆ ಮುಂಚೆ ನಕ್ಷತ್ರಗಳು ಕಾಣುತ್ತಿರುವಾಗ ಆರಂಭಿಸಬೇಕು. ಮಾಧ್ಯಾಹ್ನಿಕವನ್ನು ಆಕಾಶದಲ್ಲಿ ಸೂರ್ಯನು ಮಧ್ಯಭಾಗದಲ್ಲಿರುವಾಗಲೂ, ಸಾಯಂಸಂಧ್ಯಾ ವಂದನೆಯನ್ನು ಸೂರ್ಯನು ಮುಳುಗುವುದರೊಳಗೆ ಪ್ರಾರಂಭ ಮಾಡಬೇಕು.

**ತಸ್ಮಾದ್ ಬ್ರಾಹ್ಮಣೋ ಅಹೋರಾತ್ರಸಂಧಿಯೋಗೇ ಸಂಧ್ಯಾಮುಪಾಸ್ತೇ,**
**ಸಜ್ಯೋತಿಷೋ ಜ್ಯೋತಿಷೋಽದರ್ಶನಾತ್ ॥** –ಛಾಂ.ಶ್ರುತಿ.

ಆದ್ದರಿಂದ ಬ್ರಾಹ್ಮಣನು ಹಗಲು ಮುಗಿದು ರಾತ್ರಿ ಬರುವ ಸಂಧಿಕಾಲದಲ್ಲಿ ಸೂರ್ಯನಿರುವಾಗ ಸಾಯಂಸಂಧ್ಯೆಯನ್ನೂ, ರಾತ್ರಿ ಮುಗಿದು ಹಗಲು ಬರುವ ಸಂಧಿಕಾಲದಲ್ಲಿ ಸೂರ್ಯೋದಯಕ್ಕೆ ಮೊದಲು ಪ್ರಾತಃಸಂಧ್ಯೆಯನ್ನೂ ಮಾಡಬೇಕು.

**ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ ।**
**ಅಧಮಾ ಸೂರ್ಯಸಹಿತಾ ಪ್ರಾತಃಸಂಧ್ಯಾ ತ್ರಿಧಾ ಮತಾ ॥** –ಸ್ಮೃ.ರ.

ಪ್ರಾತಃಸಂಧ್ಯಾವಂದನೆಯನ್ನು ಸೂರ್ಯೋದಯಕ್ಕೆ ಮುಂಚೆ ನಕ್ಷತ್ರಗಳು ಚೆನ್ನಾಗಿ ಕಾಣುತ್ತಿರುವಾಗ ಮಾಡುವುದು ಉತ್ತಮ. ನಕ್ಷತ್ರಗಳು ಹಾಗೂ ಸೂರ್ಯನು ಕಾಣದಿರುವಾಗ ಮಾಡುವುದು ಮಧ್ಯಮ. ಸೂರ್ಯೋದಯದ ಅನಂತರ ಮಾಡುವುದು ಅಧಮ.

**ಅರ್ಘ್ಯಪ್ರದಾನತಃ ಪೂರ್ವಮುದಯೇಽಸ್ತಮಯೇಽಪಿ ವಾ ।**
**ಗಾಯತ್ರ್ಯಷ್ಟಶತಂ ಜಪ್ಯಂ ಪ್ರಾಯಶ್ಚಿತ್ತಂ ದ್ವಿಜನ್ಮಭಿಃ ॥** –ಸ್ಮೃ.ರ.

ಪ್ರಾತಃಕಾಲದ ಸಂಧ್ಯಾರ್ಘ್ಯಪ್ರದಾನ ಮಾಡುವಾಗ ಸೂರ್ಯೋದಯವಾದರೂ, ಸಾಯಂಕಾಲದ ಸಂಧ್ಯಾರ್ಘ್ಯಪ್ರದಾನ ಮಾಡುವಾಗ ಸೂರ್ಯಾಸ್ತವಾದರೂ ಈ ದೋಷಪರಿಹಾರಕ್ಕಾಗಿ ೧೦೮ ಸಲ ಗಾಯತ್ರೀಜಪ ಮಾಡಬೇಕು. 'ವಿಧಿನಾಽಪಿಕೃತಾ ಸಂಧ್ಯಾ ಕಾಲಾತೀತಾ ತು ನಿಷ್ಫಲಾ' ಸಂಧ್ಯಾವಂದನೆಯ ಕಾಲ ಮೀರಿದನಂತರ ವಿಧಿಪ್ರಕಾರ ಸಂಧ್ಯಾವಂದನ ಮಾಡಿದರೂ ನಿಷ್ಫಲ.

**ಉಪಾಸತೇ ತು ಯಾಂ ಸಂಧೌ ನಿಶಾಯಾ ದಿವಸಸ್ಯ ಚ ।**
**ತಾಮೇವ ಸಂಧ್ಯಾಂ ತಸ್ಮಾತ್ತು ಪ್ರವದಂತಿ ಮನೀಷಿಣಃ ॥** –ವ್ಯಾಸಃ

ರಾತ್ರಿ ಮುಗಿದು ಹಗಲು ಬರುವ, ಹಾಗೆಯೇ ಹಗಲು ಮುಗಿದು ರಾತ್ರಿ ಬರುವ ಈ ಸಂಧಿಕಾಲಕ್ಕೆ ಸಂಧ್ಯಾಕಾಲ ಎಂದು ಜ್ಞಾನಿಗಳು ಹೇಳುತ್ತಾರೆ.

**ಮುಖ್ಯಕಲ್ಪೋಽನುಕಲ್ಪಶ್ಚ ಸರ್ವಸ್ಮಿನ್ ಕರ್ಮಣಿ ಸ್ಥಿತೌ ।** –ಮೈ.ಮ.ನು.

ಎಲ್ಲಾ ಕರ್ಮಗಳಿಗೂ ಮುಖ್ಯಕಾಲ, ಗೌಣಕಾಲ ಎಂಬುದಿದೆ.

**ಮುಖ್ಯಕಾಲೇ ಯದಾವಶ್ಯಂ ಕರ್ಮ ಕರ್ತುಂ ನ ಶಕ್ಯತೇ ।**
**ಗೌಣಕಾಲೇಽಪಿ ಕರ್ತವ್ಯಂ ಗೌಣೋಽಪ್ಯೇತಾದೃಶೋ ಮತಃ ॥** –ಗೋ.

ಅವಶ್ಯ ಮಾಡತಕ್ಕ ಕರ್ಮವನ್ನು ಮುಖ್ಯಕಾಲದಲ್ಲಿ ಮಾಡಲಿಕ್ಕಾಗದಿದ್ದರೆ ಅದನ್ನು ಗೌಣಕಾಲದಲ್ಲಾಗಲೀ ಮಾಡಬೇಕು. ಗೌಣಕಾಲವು ಮಧ್ಯಮ.

**ಸಾಯಂಕಾಲೇ ತ್ರಿಘಟಿಕಾ ಅಸ್ತಾದುಪರಿ ಭಾಸ್ವತಃ ।**
**ಪ್ರಾತಃಕಾಲೇ ತ್ರಿಘಟಿಕಾಸ್ತತ್ರ ಸಂಧ್ಯಾಂ ಸಮಾಚರೇತ್ ॥**

ಸೂರ್ಯಾಸ್ತಮಯದನಂತರ ಮೂರು ಘಳಿಗೆ ಸಾಯಂಸಂಧ್ಯಾವಂದನೆಗೂ, ಸೂರ್ಯೋದಯದನಂತರ ಮೂರುಘಳಿಗೆ ಪ್ರಾತಃಸಂಧ್ಯಾವಂದನೆಗೂ ಗೌಣಕಾಲ.

**ಚತಸ್ರೋ ಘಟಿಕಾ ಸಾಯಂ ಗೌಣಕಾಲೋಽಸ್ತಿ ಮಧ್ಯಮಃ ।**
**ಚತಸ್ರೋ ಘಟಿಕಾ ಪ್ರಾತಃ ಗೌಣಕಾಲೋಽಸ್ತಿ ಮಧ್ಯಮಃ ॥** –ಸಂಧ್ಯಾಭಾಷ್ಯೇ

ನಾಲ್ಕು ಘಳಿಗೆ ಸೂರ್ಯಾಸ್ತಮದ ಅನಂತರ ಸಾಯಂಸಂಧ್ಯಾವಂದನೆಗೂ, ಸೂರ್ಯೋದಯದ ಅನಂತರ ನಾಲ್ಕು ಘಳಿಗೆ ಪ್ರಾತಃಸಂಧ್ಯಾವಂದನೆಗೂ ಮಧ್ಯಮ ಗೌಣಕಾಲ.

**ಉದಯಾಸ್ತಮಯಾದೂರ್ಧ್ವಂ ಯಾವತ್ಸ್ಯಾದ್ಘಟಿಕಾತ್ರಯಮ್ ।**
**ತಾವತ್ಸಂಧ್ಯಾಮುಪಾಸೀತ ಪ್ರಾಯಶ್ಚಿತ್ತಂ ತತಃ ಪರಮ್ ॥** –ದೇ.ಭಾ.ಸ್ಕಂ., ಅ. ೧೦

ಸೂರ್ಯೋದಯ ಹಾಗೂ ಸೂರ್ಯಾಸ್ತಮಯದ ಅನಂತರ ಮೂರು ಘಳಿಗೆಯೊಳಗೆ ಸಂಧ್ಯಾವಂದನೆ ಮಾಡಬೇಕು. ಮೂರು ಘಳಿಗೆ ದಾಟಿದರೆ ಮತ್ತೆ ಪ್ರಾಯಶ್ಚಿತ್ತ ಮಾಡಬೇಕು.

**ಕಾಲಾತಿಕ್ರಮಣೇ ಸ್ವಲ್ಪೇ ತ್ರಿಸಂಧ್ಯಾಮಪಿ ಕರ್ಹಿಚಿತ್ ।**
**ಚತುರರ್ಘ್ಯಂ ಪ್ರಕುರ್ವೀತ ಶಿರೋ ವ್ಯಾಹೃತಿಪೂರ್ವಕಮ್ ॥** –ಕೃ.ಸ್ಮ.

ಮೂರು ಸಂಧ್ಯೆಯಲ್ಲಿಯೂ ಈ ಹಿಂದೆ ಹೇಳಿರುವ ಕಾಲವು ಅತೀತವಾದರೆ ಮಹಾವ್ಯಾಹೃತಿ, ಗಾಯತ್ರೀ, ಶಿರೋಮಂತ್ರ ಹೇಳಿ ನಾಲ್ಕನೇ ಅರ್ಘ್ಯ ಕೊಡಬೇಕು. ಇದರಿಂದ ಏನು ತಿಳಿಯಬೇಕೆಂದರೆ, ಪ್ರತಿನಿತ್ಯ ಸಕಾಲದಲ್ಲೇ ಸಂಧ್ಯಾವಂದನೆಯನ್ನು ತಪ್ಪದೇ ಮಾಡಬೇಕು. ಕಾರಣಾಂತರದಿಂದ ಯಾವಾಗಲಾದರೂ ಒಂದು ದಿನ ಕಾಲ ಅತೀತವಾದರೆ ಆಗ ಪ್ರಾಯಶ್ಚಿತ್ತ ಮಾಡಬೇಕೇ ವಿನಾ ಪ್ರಾಯಶ್ಚಿತ್ತ ಇದೆಯಲ್ಲ ಎಂದು ಉಪೇಕ್ಷೆ ಮಾಡದೆ ಕಾಲಾತೀತವಾಗದಂತೆ ಪ್ರತಿನಿತ್ಯ ನೋಡಿಕೊಳ್ಳಬೇಕು.

**ಯಸ್ಮಿನ್ ಕಾಲೇ ತು ಯತ್ಕರ್ಮ ತತ್ಕಾಲಾಧೀಶ್ವರೀಂ ಚ ತಾಮ್ ।**
**ಸಂಧ್ಯಾಮುಪಾಸ್ಯ ಪಶ್ಚಾತ್ತು ತತ್ಕಾಲೀನಂ ಸಮಾಚರೇತ್ ॥** –ದೇ.ಭಾ.

ಯಾವ ಸಂಧ್ಯಾಕಾಲದಲ್ಲಿ ಬೇರೆ ಕರ್ಮ ಮಾಡುವುದಿದ್ದರೆ, ಅವಶ್ಯ ಸಂಧ್ಯಾ ಕಾಲದಲ್ಲೇ ಮಾಡತಕ್ಕ ಸಂಧ್ಯಾವಂದನೆಯನ್ನು ಮೊದಲು ಮಾಡಿಕೊಂಡು ಬೇರೆ ಕರ್ಮಗಳನ್ನು ಮತ್ತೆ ಮಾಡಬೇಕು.

**ಶುಚಿರ್ವಾಽಪ್ಯಶುಚಿರ್ವಾಽಪಿ ಕಾಲೇ ಸಂಧ್ಯಾಂ ಸಮಾಚರೇತ್ ॥** –ಸ್ಮ.ರ.

ತ್ರಿಸಂಧ್ಯಾಕಾಲದಲ್ಲೇ ಸಂಧ್ಯಾವಂದನೆಯನ್ನು ಮಡಿಯಲ್ಲಿಯೇ ಮಾಡಬೇಕು. ಸಂಧ್ಯಾಕಾಲದಲ್ಲಿ ಅಶುಚಿಯಾಗಿದ್ದರೂ ಕೂಡ ಸಂಧ್ಯಾವಂದನೆಯನ್ನು ಮಾಡಬೇಕು. ಅಶುಚಿಯಾಗಿದ್ದರೂ ಎಂದರೆ ಪ್ರಯಾಣಕಾಲದಲ್ಲಿ ಮಧ್ಯೆ ಸಂಧ್ಯಾಕಾಲ ಬಂದಾಗ, ಅಥವಾ ರುಗ್ಣಶಯ್ಯೆಯಲ್ಲಿ (ರೋಗಾವಸ್ಥೆಯಲ್ಲಿ) ಸ್ನಾನ ಮಾಡಲು ಅಶಕ್ತನಾದಾಗ

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ ।**
**ಯಃ ಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಾಂತರಃ ಶುಚಿಃ ॥**

ಈ ಮಂತ್ರದಿಂದ ನೀರು ಪ್ರೋಕ್ಷಣೆ ಮಾಡಿಕೊಂಡು. 'ಪುಂಡರೀಕಾಕ್ಷಾಯ ನಮಃ' ಎಂದು ಹೇಳಿ ಮಾನಸಿಕ ಶುದ್ಧಿಯನ್ನು ಮಾಡಿಕೊಂಡು. ಶ್ರೋತ್ರಾಚಮನ ಮಾಡಿ. ಮಾನಸಿಕಸಂಕಲ್ಪ ಮಾಡಿ ಗಾಯತ್ರೀಮಂತ್ರ ಹೇಳಿ ಮೂರು ಸೂರ್ಯಾರ್ಘ್ಯಗಳನ್ನು ನೀಡಿ. ಹತ್ತುಸಲ ಗಾಯತ್ರಿಯನ್ನು ಮನಸ್ಸಿನಲ್ಲಿ ಸ್ಮರಿಸಿ.

**ಯಾಂ ಸದಾ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ।**
**ಸಾಯಂ ಪ್ರಾತರ್ನಮಸ್ಯಂತಿ ಸಾ ಮಾಂ ಸಂಧ್ಯಾಽಭಿರಕ್ಷತು ॥**

ಸಕಲ ಸ್ಥಾವರಜಂಗಮಗಳಿಂದ ನಮ್ಮಳಾಗಿ ಹೇಳಲ್ಪಟ್ಟ ಸಂಧ್ಯೆಯೆಂದರೆ. ಪರಮಾತ್ಮನೇ. 'ಯಃ ಸಂಧ್ಯಾಮುಪಾ-ಸತೇ ಬ್ರಹ್ಮೈವ ತದುಪಾಸತೇ' ಎಂದು ಶ್ರುತಿ. 'ಎಲ್ಲಾ ಜಗತ್ತೂ ಸಂಧ್ಯಾಕಾಲದಲ್ಲಿ ಪರಮಾತ್ಮನೇ ಉಪಾಸನೆ ಮಾಡುತ್ತದೋ ಆ ಪರಮಾತ್ಮನು ನನ್ನನ್ನು ರಕ್ಷಿಸಲಿ' ಎಂದು ಪ್ರಾರ್ಥಿಸಿ ಕೃಷ್ಣಾರ್ಪಣ ಬಿಡಬೇಕು.

**ಮನಃಪ್ರಹರ್ಷಣಂ ಶೌಚಂ ಮೌನಂ ಮಂತ್ರಾರ್ಥಚಿಂತನಮ್ ।**
**ಅವ್ಯಗ್ರತ್ವಮನಿರ್ವೇದೋ ಜಪಸಂಪತ್ತಿಹೇತವಃ ॥** –ಬ್ರ.ಪು.

ಜಪಮಾಡುವ ಕಾಲದಲ್ಲಿ ಶಾಂತಚಿತ್ತನಾಗಿರಬೇಕು. ಶುದ್ಧವಾಗಿರಬೇಕು. ಮೌನವಾಗಿ. ಏಕಾಗ್ರಚಿತ್ತದಿಂದ ಮಂತ್ರಾರ್ಥಚಿಂತನೆ ನಡೆಸುತ್ತಿರಬೇಕು. ವ್ಯಥೆಪಡಬಾರದು. ಹೀಗೆ ಮಾಡಿದ ಜಪವು ಸಂಪತ್ತಿಗೆ ಕಾರಣವಾಗುತ್ತದೆ. ಸಂಧ್ಯಾವಂದನೆಗೆ 'ಪ್ರತಿವಿಪ್ರನಿಯತಕರ್ಮ' ಎಂದು ಹೆಸರಿದ್ದು. 'ಅಹರಹಃ ಸಂಧ್ಯಾಮುಪಾಸೀತ' ಎಂದು ಶ್ರುತಿ. ಪ್ರತಿಯೊಬ್ಬ ಬ್ರಾಹ್ಮಣನೂ ಪ್ರತಿನಿತ್ಯ ತ್ರಿಸಂಧ್ಯಾಕಾಲದಲ್ಲಿ ಅವಶ್ಯವಾಗಿ ಇದನ್ನು ಆಚರಿಸಲೇಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ.

**ಉನ್ಮತ್ತದೋಷಯುಕ್ತಸ್ಯ ವ್ಯಾಧಿಸ್ಥಸ್ಯ ಚ ನಿತ್ಯಶಃ ।**
**ಪಿತಾ ಭ್ರಾತಾ ತದನ್ಯೋ ವಾ ಸಂಧ್ಯಾವಂದನಮಾಚರೇತ್ ॥** –ತ್ರೈ.ಸಂ.ಭಾ.

ಹುಚ್ಚನಾಗಿದ್ದರೂ. ಪ್ರತಿನಿತ್ಯ ರೋಗಿಷ್ಠನಾಗಿದ್ದರೂ ಕೂಡ ಅವನ ಪರವಾಗಿ ತಂದೆ ಅಥವಾ ಅಣ್ಣ-ತಮ್ಮಂದಿರು ಅಥವಾ ಬೇರೆ ಯಾರಾದರೂ ಕಾಲದಲ್ಲಿ ಸಂಧ್ಯಾವಂದನೆ ಮಾಡಬೇಕು.

**ವಿಪ್ರೋ ವೃಕ್ಷೋ ಮೂಲಕಾನ್ಯತ್ರ ಸಂಧ್ಯಾವೇದಃ ಶಾಖಾ ಧರ್ಮಕರ್ಮಾಣಿ ಪತ್ರಮ್ ।**
**ತಸ್ಮಾನ್ಮೂಲಂ ಯತ್ನತಃ ಪಾಲನೀಯಂ ಛಿನ್ನೇ ಮೂಲೇ ನೈವ ವೃಕ್ಷೋ ನ ಶಾಖಾ ॥** –ದೇ.ಭಾ.ಗ.

ಬ್ರಾಹ್ಮಣನೆಂಬ ಮರದ ಮೂಲವೇ ಸಂಧ್ಯಾವಂದನೆ. ವೇದಗಳೇ ಅದರ ಶಾಖೆಗಳು. ವೇದೋಕ್ತ ಧರ್ಮಕಾರ್ಯಾಚರಣೆಯೇ ಅದರ ಪತ್ರಗಳು. ಆದ್ದರಿಂದ ಈ ವೃಕ್ಷದ ಮೂಲವಾದ ಸಂಧ್ಯಾವಂದನೆಯನ್ನು ಪ್ರತಿನಿತ್ಯ ಸಕಾಲದಲ್ಲಿ ಮಾಡುವುದರಿಂದ ಮರವು ಉಳಿಯುತ್ತದೆ. ಇದನ್ನು ಮಾಡದಿದ್ದರೆ ವೃಕ್ಷವೂ ಇಲ್ಲ. ಶಾಖಾಪತ್ರಗಳೂ ಇಲ್ಲ. ಆದ್ದರಿಂದಲೇ ಹೇಳಿದ್ದು-

**ಕುರ್ಯಾದನ್ಯಂ ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ।**

ಬೇರೆ ಯಾವುದನ್ನು ಮಾಡು. ಬಿಡು. ಮಿತ್ರಸಂಬಂಧಿಯಾದ ಗಾಯತ್ರಿಯೇ ಪ್ರಧಾನವಾಗಿರುವ ಸಂಧ್ಯಾವಂದನೆಯನ್ನು ಮಾಡುವವನೇ ನಿಜವಾಗಿ ಬ್ರಾಹ್ಮಣ.

**ಬ್ರಹ್ಮಚಾರೀ ಗೃಹಸ್ಥಶ್ಚ ಶತಮಷ್ಟೋತ್ತರಂ ಜಪೇತ್ ।**
**ವಾನಪ್ರಸ್ಥೋ ಯತಿಶ್ಚೈವ ಸಹಸ್ರಾದಧಿಕಂ ಜಪೇತ್ ॥**

ಬ್ರಹ್ಮಚಾರಿಯೂ ಗೃಹಸ್ಥಾಶ್ರಮಿಯೂ ಪ್ರತಿನಿತ್ಯ ನೂರೆಂಟು ಗಾಯತ್ರೀಮಂತ್ರ ಜಪ ಮಾಡಬೇಕು. ವಾನಪ್ರಸ್ಥನೂ. ಸಂನ್ಯಾಸಿಯೂ ಸಹಸ್ರಕ್ಕಿಂತ ಜಾಸ್ತಿ ಜಪ ಮಾಡಬೇಕು.

**ಅಷ್ಟೋತ್ತರಶತಂ ನಿತ್ಯಮಷ್ಟಾವಿಂಶತಿಮೇವ ವಾ ।**
**ವಿಧಿನಾ ದಶಕಂ ವಾಽಪಿ ತ್ರಿಕಾಲೇ ಪ್ರಜಪೇದ್ಬುಧಃ ॥** –ಸ್ಮೃ.ರ.

ತಿಳಿದವನು ನಿತ್ಯವೂ ೧೦೮ ಅಥವಾ ೨೮ ಅಥವಾ ಕನಿಷ್ಠಪಕ್ಷ ಹತ್ತು ಗಾಯತ್ರೀಮಂತ್ರಗಳನ್ನಾದರೂ ವಿಧಿಪ್ರಕಾರ ತ್ರಿಸಂಧ್ಯಾಕಾಲದಲ್ಲಿ ಜಪಿಸಬೇಕು.

ಗೃಹಸ್ಥಾಶ್ರಮಿಯೂ, ಬ್ರಹ್ಮಚಾರಿಯೂ ಆದಿಯಲ್ಲಿ ಮಾತ್ರ ಒಂದು ಓಂಕಾರ ಹೇಳಿ ವ್ಯಾಹೃತಿ ಗಾಯತ್ರಿಯ ಮೂರು ಪಾದಗಳನ್ನು ವಿಂಗಡಿಸಿ ಜಪಿಸಬೇಕು. ಯತಿಗಳು ಆದ್ಯಂತದಲ್ಲಿ ಓಂಕಾರ ಹೇಳಿ ಸಂಪುಟರೀತಿಯಿಂದ ಆರು ಓಂಕಾರಸಹಿತವಾಗಿ ಗಾಯತ್ರೀಯನ್ನು ಜಪಿಸಬೇಕು.

## ಅಶೌಚದಲ್ಲಿ ಸಂಧ್ಯಾವಂದನೆ

ಸೂತಕೇ ತು ಭಾರದ್ವಾಜಃ–

**ಜಾತಾಶೌಚೇ ಮೃತಾಶೌಚೇ ಪ್ರಾಣಾಯಾಮಮಮಂತ್ರಕಮ್ ।**
**ತಥಾ ಮಾರ್ಜನಮಂತ್ರಾಂಸ್ತು ಮನಸೋಚ್ಚಾರ್ಯ ಮಾರ್ಜಯೇತ್ ॥**

**ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್ ।**
**ಗಾಯತ್ರೀಂ ಮನಸೋಚ್ಚಾರ್ಯ ಉಪಸ್ಥಾನಂ ತು ವಾ ನಹಿ ॥**

ಜಾತಾಶೌಚ, ಮೃತಾಶೌಚಕಾಲದಲ್ಲಿ ಅಮಂತ್ರಕವಾಗಿ ಪ್ರಾಣಾಯಾಮ ಮಾಡಿ ಸಂಕಲ್ಪದ ಅನಂತರ ಆಪೋಹಿಷ್ಠಾದಿ ಮಂತ್ರಗಳನ್ನು ಮನಸ್ಸಿನಲ್ಲಿ ಹೇಳಿ ಪ್ರೋಕ್ಷಣೆ ಮಾಡಿ, ಸೂರ್ಯಶ್ಚೇತ್ಯಾದಿ ಮಂತ್ರವನ್ನೂ ಮನಸ್ಸಿನಲ್ಲೇ ಹೇಳಿ ಮಂತ್ರಾಚಮನೆ ಮಾಡಿ ಪುನಃ ದ್ವಿರಾಚಮನೆಯ ಅನಂತರ 'ದಧಿಕ್ರಾವ್ಣೋ... ಆಪೋಹಿಷ್ಠಾ' ಇತ್ಯಾದಿ ಮಂತ್ರಗಳನ್ನು ಮನಸ್ಸಿನಲ್ಲೇ ಹೇಳಿ ಪುನರ್ಮಾರ್ಜನ ಮಾಡಬೇಕು. ಆಮೇಲೆ ಅರ್ಘ್ಯಪ್ರದಾನಕ್ಕೆ ಸಂಕಲ್ಪಿಸಿ, ಗಾಯತ್ರಿಯನ್ನು ಸರಿಯಾಗಿಯೇ ಹೇಳಿ ಮೂರು ಸೂರ್ಯಾರ್ಘ್ಯ ಕೊಡಬೇಕು. ಆಮೇಲೆ ಹತ್ತು ಸಲ ಗಾಯತ್ರಿಯನ್ನು ಮನಸ್ಸಿನಲ್ಲಿ ಸ್ಮರಿಸಿ ಸಂಧ್ಯಾವಂದನೆಯನ್ನು ಕೃಷ್ಣಾರ್ಪಣ ಬಿಡಬೇಕು. ಉಪಸ್ಥಾನ ಹಾಗೂ ಇತರ ಮಂತ್ರಗಳನ್ನು ಜಪಿಸಬಾರದು. ಆಶೌಚಕಾಲದಲ್ಲಿ ಇಷ್ಟನ್ನಾದರೂ ಯಾಕೆ ಮಾಡಬೇಕೆಂದರೆ,

**ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು ।**
**ಯದನ್ಯತ್ಕುರುತೇ ಕರ್ಮ ನ ತಸ್ಯ ಫಲಮಶ್ನುತೇ ॥** –ಕೃ.ಸ್ಮೃ.

ಸಂಧ್ಯಾವಂದನೆ ಮಾಡದಿರುವವನು ಯಾವಾಗಲೂ ಅಶುದ್ಧನೇ ನಿಜ. ಇತರ ಯಾವುದೇ ಕರ್ಮಾಚರಣೆಯಲ್ಲಿ ಅವನು ಅಯೋಗ್ಯನು. ಅವನಿಗೆ ಇತರ ಕರ್ಮಗಳ ಆಚರಣೆಯಿಂದ ಏನೂ ಫಲ ದೊರಕಲಾರದು.

**ನೋಪತಿಷ್ಠತಿ ಯಃ ಪೂರ್ವಾಂ ನೋಪಾಸ್ತೇ ಯಶ್ಚ ಪಶ್ಚಿಮಾಮ್ ।**
**ಸ ಶೂದ್ರವದ್ಬಹಿಷ್ಕಾರ್ಯಃ ಸರ್ವಸ್ಮಾದ್ದ್ವಿಜಕರ್ಮಸು ॥** –ಮ.ಸ್ಮೃ.

ಯಾವಾತನು ಪ್ರಾತಃಸಂಧ್ಯಾವಂದನೆಯನ್ನೂ ಸಾಯಂಸಂಧ್ಯಾವಂದನೆಯನ್ನೂ ಮಾಡುವುದಿಲ್ಲವೋ ಅವನು ಶೂದ್ರನಂತೆ. ಬ್ರಾಹ್ಮಣರು ಮಾಡುವ ಎಲ್ಲಾ ಕಾರ್ಯಗಳಲ್ಲಿಯೂ ಅವನು ಬಹಿಷ್ಕಾರ್ಯನು.

**ಯಃ ಸಂಧ್ಯಾಂ ಕಾಲತಃ ಪ್ರಾಪ್ತಮಾಲಸ್ಯಾದತಿವರ್ತತೇ ।**
**ಸ ಜೀವನ್ನೇವ ಚಂಡಾಲಃ ಸರ್ವಕರ್ಮಬಹಿಷ್ಕೃತಃ ॥** –ಕೃ.ಸ್ಮೃ.

ಆಲಸ್ಯದಿಂದ ಸಂಧ್ಯಾವಂದನೆಯನ್ನು ನಡೆಸದಿದ್ದವನು ಸರ್ವಕರ್ಮಗಳಿಂದಲೂ ಬಹಿಷ್ಕೃತನಾಗಿ ಕರ್ಮಚಂಡಾಲನೆನಿಸುವನು.

**ಸಂಧ್ಯಾ ಯೇನಾಽವಿಜ್ಞಾನೀತಾ ಸಂಧ್ಯಾ ಯೇನಾನುಪಾಸಿತಾ ।**
**ಜೀವಮಾನೋ ಭವೇಚ್ಛೂದ್ರೋ ಮೃತಃ ಶ್ವಾ ಸೋಽಭಿಜಾಯತೇ ॥** –ಸ್ಮೃ.ರ.

ಸಂಧ್ಯಾವಂದನೆಯನ್ನು ತಿಳಿದು ಅನುಷ್ಠಾನ ಮಾಡದವನು ಜೀವಂತನಾಗಿರುವಾಗ ಶೂದ್ರನೆನಿಸಿ, ಮುಂದಿನ ಜನ್ಮದಲ್ಲಿ ನಾಯಿಯಾಗಿ ಹುಟ್ಟುವನು. ಆದ್ದರಿಂದ ತಂದೆತಾಯಿಗಳು ತಮ್ಮ ಮಕ್ಕಳಿಗೆ ಸಕಾಲದಲ್ಲಿ ಉಪನಯನ ಮಾಡುವುದು ಎಷ್ಟು ಮುಖ್ಯವೋ ಮುಂದೆ ಅವನು ಸರಿಯಾಗಿ ಸಕಾಲದಲ್ಲಿ ಸಂಧ್ಯಾವಂದನೆಯನ್ನು ನಡೆಸುವಂತೆ ವ್ಯವಸ್ಥೆಗೊಳಿಸುವುದೂ ಅಷ್ಟೇ ಮುಖ್ಯ.

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥** –ಭ.ಗೀ.

ಎಂಬಂತೆ, ಮನೆಯಲ್ಲಿ ಹಿರಿಯರಾದ ತಂದೆ, ಅಣ್ಣಂದಿರು ಸಕಾಲದಲ್ಲಿ ಪ್ರತಿನಿತ್ಯ ಸಂಧ್ಯಾವಂದನಾದಿ ಅನುಷ್ಠಾನ ಮಾಡಿದರೆ ತಮ್ಮ ಮಕ್ಕಳೂ ಸಂಧ್ಯಾ ವಂದನೆಯನ್ನು ಮಾಡಿಯಾರು ಎಂಬ ಎಚ್ಚರವೂ ಹಿರಿಯರಾದವರಿಗೆ ಇರಬೇಕು.

**ಸಂಧ್ಯಾಮಿಷ್ಟಿಂ ಚ ಹೋಮಂ ಚ ಯಾವಜ್ಜೀವಂ ಸಮಾಚರೇತ್ ।**
**ನ ತ್ಯಜೇತ್ಸೂತಕೇ ವಾಽಪಿ ತ್ಯಜನ್ ಗಚ್ಛತ್ಯಧೋಗತಿಮ್ ॥** –ಮ.ಸ್ಮೃ

ಆದ್ದರಿಂದ ಪ್ರತಿಯೊಬ್ಬ ಬ್ರಾಹ್ಮಣರೂ ಸಕಾಲದಲ್ಲಿ ತ್ರಿಸಂಧ್ಯಾವಂದನೆಯನ್ನೂ (ಅಗ್ನಿಹೋತ್ರಿಗಳು ದರ್ಶೇಷ್ಟಿ-ಪೌರ್ಣಮಾಸೇಷ್ಟಿಗಳನ್ನೂ), ಬ್ರಹ್ಮಚಾರಿಯು ಅಗ್ನಿಕಾರ್ಯವನ್ನೂ (ಬ್ರಹ್ಮಚರ್ಯಾಶ್ರಮ ಮುಗಿಯುವವರೆಗೆ), ಗೃಹಸ್ಥಾಶ್ರಮಿಗಳು ಔಪಾಸನ ಪಂಚಯಜ್ಞಾದಿಗಳನ್ನೂ ಯಾವಜ್ಜೀವಪರ್ಯಂತ ಮಾಡಬೇಕು. ಸಂಧ್ಯಾವಂದನೆಯನ್ನು ಮಾತ್ರ ಸೂತಕಾದಿಗಳಲ್ಲಿಯೂ ಈ ಮೇಲೆ ಶಾಸ್ತ್ರದಲ್ಲಿ ಹೇಳಿದ್ದಷ್ಟನ್ನು ಮಾಡಲೇಬೇಕು. ಮಾಡದಿದ್ದರೆ ಅವರಿಗೆ ಅಧೋಗತಿ ಆಗುತ್ತದೆ.

**ಬ್ರಹ್ಮಣೋಪಾಸಿತಾ ಸಂಧ್ಯಾ ವಿಷ್ಣುನಾ ಶಂಕರೇಣ ಚ ।**
**ಕಸ್ತಾಂ ನೋಪಾಸತೇ ದೇವೀಂ ಸಿದ್ಧಿಕಾಮೋ ದ್ವಿಜೋತ್ತಮಃ ॥** –ಯಾಜ್ಞ.ಸ್ಮೃ

ತ್ರಿಮೂರ್ತಿಗಳಿಂದಲೂ ಉಪಾಸಿಸಲ್ಪಟ್ಟ ಸಂಧ್ಯಾವಂದನೆಯನ್ನು ಸಿದ್ಧಿಯನ್ನು ಇಚ್ಛಿಸುವ ಬ್ರಾಹ್ಮಣರು ಯಾರೂ ಮಾಡದಿರಲಿಕ್ಕಿಲ್ಲ.

**ಗೃಹೇ ಕೃತಗುಣಾ ಸಂಧ್ಯಾ ಗೋಷ್ಠೇ ದಶಗುಣಾ ಭವೇತ್ ।**
**ತೀರ್ಥೇ ಸಹಸ್ರಗುಣಿತಾ ಹ್ಯನಂತಾ ವಿಷ್ಣುಸನ್ನಿಧೌ ॥** –ಸ್ಮೃ.ರ.

ಮನೆಯಲ್ಲಿ ಮಾಡಿದ ಸಂಧ್ಯಾವಂದನೆಗೆ ಒಂದು ಫಲವಾದರೆ, ಗೋಶಾಲೆಯಲ್ಲಿ ಮಾಡಿದಾಗ ಹತ್ತು ಫಲ ಬರುತ್ತದೆ. ತೀರ್ಥಸಮೀಪದಲ್ಲಿ ಸಹಸ್ರಫಲವಾದರೆ, ವಿಷ್ಣುಸನ್ನಿಧಿಯಲ್ಲಿ ಅನಂತಫಲ ಬರುತ್ತದೆ.

**ಅನೃತಂ ಮದ್ಯಗಂಧಂ ಚ ದಿವಾ ಸ್ವಾಪಂ ಚ ಮೈಥುನಮ್ ।**
**ಪುನಾತಿ ವೃಷಲಾನ್ನಂ ಚ ಸಂಧ್ಯಾ ಬಹಿರುಪಾಸಿತಾ ॥** –ಸ್ಮೃ.ರ.

ಸಾಯಂಸಂಧ್ಯಾವಂದನೆಯನ್ನು ಮನೆಯಿಂದ ಹೊರಗೆ ಮಾಡಿದರೆ ಸುಳ್ಳು ಹೇಳಿದ, ಮದ್ಯಗಂಧಾಘ್ರಾಣ ಮಾಡಿದ, ಹಗಲಿನಲ್ಲಿ ಮಲಗಿದ ಅಥವಾ ಸ್ತ್ರೀಸಂಗ ಮಾಡಿದ, ವೃಷಲಾನ್ನ(ಶೂದ್ರಾನ್ನ) ಭೋಜನ ಮಾಡಿದ ಎಲ್ಲಾ ಪಾಪಗಳೂ ಪರಿಹಾರವಾಗುವುವು.

## ಸಂಧ್ಯಾವಂದನೆಯ ವಿಷಯದಲ್ಲಿ ಶ್ರುತಿಪ್ರಮಾಣ

ಉದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯನ್
ಕುರ್ವನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇ ॥ —ತೈತ್ತಿರೀಯಬ್ರಾಹ್ಮಣಶ್ರುತಿ.

ತಸ್ಮಾದ್ಬ್ರಾಹ್ಮಣೋ ಅಹೋರಾತ್ರಸಂಯೋಗೇ ಸಂಧ್ಯಾಮುಪಾಸ್ತೇ
ಸ ಜ್ಯೋತಿಷೋ ಜ್ಯೋತಿಷೋಽದರ್ಶನಾದಿತಿ ॥ —ಛಾಂದೋಗ್ಯಶ್ರುತಿ.

ಆಸೂರ್ಯೋದಯಾತ್ ಪೂರ್ವೋತ್ತರಾಮುಖಿಸ್ತ್ವಧರೋತ್ತರಾಶಾಮುಖಿ ಆನಕ್ಷತ್ರೋದಯಾದಿತಿ । ತಮಹ ವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಃ ಸಂಧ್ಯಾಯಾಂ ಗಾಯತ್ರ್ಯಾಭಿಮಂತ್ರಿತಾಽಽಪ ಊರ್ಧ್ವಂ ವಿಕ್ಷಿಪತಂತೀತಿ ಬ್ರಹ್ಮವಾದಿನೋ ವದಂತಿ । ತಸ್ಮಾದ್ಬ್ರಾಹ್ಮಣೋಽಹೋರಾತ್ರೇ ಸಂಧ್ಯಾಮುಪಾಸ್ತೇ ತಸ್ಮಾದ್ಬ್ರಹ್ಮಣಃ ಸಾಯಮಾಸೀನಃ ಸಂಧ್ಯಾಮುಪಾಸ್ತೇ, ತಸ್ಮಾತ್ಪ್ರಾತಸ್ತಿಷ್ಠನ್ । ಕಾ ಸಂಧ್ಯಾ, ಕಶ್ಚ ಸಂಧ್ಯಾಕಾಲಃ, ಕಿಂಚ ಸಂಧ್ಯಾಯಾಃ ಸಂಧ್ಯಾತ್ವಂ, ದೇವಾಃ ಅಸುರಾಶ್ಚ ಸ್ಪರ್ಧಂತ, ತೇ ಅಸುರಾ ಆದಿತ್ಯಮಭಿದ್ರವನ್, ಸ ಆದಿತ್ಯೋಽಭಿಭೇತ್ತಸ್ಯ ಹೃದಯಂ ರೂಪೇಣಾತಿಷ್ಠತ್ಸ ಪ್ರಜಾಪತಿಮುಪಾಧಾವತ್ತಸ್ಯ ಪ್ರಜಾಪತಿರೇತದ್ಭೇಷಜಮಪಶ್ಯದೃತಂ ಚ ಸತ್ಯಂ ಚ ॥

ಬ್ರಹ್ಮಣೋಂಕಾರಂ ಚ ತ್ರಿಪದಾಂ ಗಾಯತ್ರೀಂ ಬ್ರಹ್ಮಣೋ ಮುಖಮಪಶ್ಯತ್ । ತಸ್ಮಾದ್ಬ್ರಾಹ್ಮಣೋಽ-ಹೋರಾತ್ರಸಂಯೋಗೇ ಸಂಧ್ಯಾಮುಪಾಸ್ತೇ, ಸ ಜ್ಯೋತಿಷೋ ಜ್ಯೋತಿಷೋಽದರ್ಶನಾತ್, ಸೋಽಸ್ಯಾಃ ಸಂಧ್ಯಾಕಾಲಃ, ಸಾ ಸಂಧ್ಯಾ, ತತ್ಸಂಧ್ಯಾಯಾಃ ಸಂಧಾತ್ವಮ್ । ಯತ್ಸಾಯಮಾಸೀನಃ ಸಂಧ್ಯಾಮುಪಾಸ್ತೇ, ತಯಾ ವೀರಸ್ಥಾನಂ ಜಯತಿ । ಯತ್ಪ್ರಾತಸ್ತಿಷ್ಠನ್ ತಯಾ ಸ್ವರ್ಗಲೋಕಂ ಜಯತಿ । ಅಥ ಯದಪಃ ಪ್ರಯುಂಕ್ತೇ ತಾ ವಿಪ್ರುಷೋ ವಜ್ರೀಭವಂತಿ, ತಾ ವಿಪ್ರುಷೋ ವಜ್ರೀಭೂತ್ವಾ ಅಸುರಾನಪಾಘ್ನಂತೀತಿ । —ರಹಸ್ಯಾಮ್ನಾಯಬ್ರಾಹ್ಮಣಶ್ರುತಿಃ ।

ರಕ್ಷಾಂಸಿ ಹ ವಾ ಪುರೋಽನುವಾಕೇ ತಪೋಗ್ರಮತಿಷ್ಠಂತ ತಾನ್ ಪ್ರಜಾಪತಿರ್ವರುಣೋಪಾಮಂತ್ರಯತತಾನಿ ವರಮವೃಣೀತಾದಿತೋ ನೋ ಯೋದ್ಧಾ ಇತಿ, ತಾನ್ ಪ್ರಜಾಪತಿರಬ್ರವೀದ್ಯೋಧಯಧ್ವಮಿತಿ ತಸ್ಮಾದುತ್ತಿಷ್ಠಂತಂ ಹ ವಾ ತಾನಿ ರಕ್ಷಾಂಸ್ಯಾದಿತ್ಯ ಯೋಧಯಂತಿ ಯಾವದಸ್ತಮನ್ವಗಾತ್ತಾನಿ ಹ ವಾ ಏತಾನಿ ರಕ್ಷಾಂಸಿ ಗಾಯತ್ರಿಯಭಿಮಂತ್ರಿತೇನಾಂಭಸಾ ಶ್ಯಾಮಂತಿ । ತ ಉಹ ವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಃ ಸಂಧ್ಯಾಯಾಂ ಗಾಯತ್ರ್ಯಾಭಿಮಂತ್ರಿತಾ ಆಪ ಊರ್ಧ್ವಂ ವಿಕ್ಷಿಪಂತಿ ತಾ ಏತಾ ಆಪೋ ವಜ್ರೀಭೂತ್ವಾ ತಾನಿ ರಕ್ಷಾಂಸಿ ಮಂದೇರಾಹುಣೇ ದ್ವೀಪೇ ಪ್ರಕ್ಷಿಪಂತಿ ಯಸ್ಯ ದಕ್ಷಿಣಂ (ಯತ್ರದಕ್ಷಿಣಂ) ಪ್ರಕ್ರಮಂತಿ ತೇನ ಪಾಪ್ಮಾನಮವಧೂನ್ವಂತ್ಯು-ದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇಽಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಯ ಏವಂ ವೇದ ॥ —ತೈತ್ತಿರೀಯಶ್ರುತಿಃ ।

ಇಲ್ಲಿಗೆ ಸಂಧ್ಯಾವಂದನೆಯ ವಿಷಯ ಮುಗಿಯಿತು.

⏭ ⏮

## ದೇವತಾಪೂಜೆ

**ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ನೇವಾರ್ಚಯೇದ್ಧರಿಮ್ ॥** –ಸ್ಮೃ.ರ.

ಸಂಧ್ಯಾವಂದನೆ, ಜಪದ ಅನಂತರ ಸರ್ವೋತ್ತಮನಾದ ವಿಷ್ಣುವನ್ನು ಧ್ಯಾನಿಸುತ್ತಾ ದೇವರ ಪೂಜೆ ಮಾಡಬೇಕು.

**ಸ್ವಸ್ಯ ಘರ್ಮಾನುವಾಕೇನ ಮಹಾಪುರುಷವಿದ್ಯಯಾ ।**
**ಪೌರುಷೇಣ ಚ ಸೂಕ್ತೇನ ಧಾಮನೀರಾಜನಾದಿಭಿಃ ॥** –ಭಾ.ಗ.ತಾ.

ಸ್ವಸ್ಯ ಎಂದರೆ ವಿಷ್ಣುಸೂಕ್ತ, ಘರ್ಮಸೂಕ್ತ, ಮಹಾಪುರುಷವಿದ್ಯೆ ಎಂದರೆ ಜಿತಂತೇಸ್ತೋತ್ರ, ಪುರುಷಸೂಕ್ತ, ಧಾಮ ಎಂದರೆ ಸಮುದ್ರಸೂಕ್ತ ಇಷ್ಟು ಮಂತ್ರಗಳನ್ನು ಹೇಳಿ ಪೂಜೆ ಮಾಡಬೇಕು.

**ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವನೇ ಫಲಮ್ ।**
**ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ॥** –ಕೃ.ಮ.

ಭಗವದ್ಭಕ್ತಿಯಲ್ಲಿ ದೀಕ್ಷೆ ಇರದ, ಭಗವಂತನನ್ನು ಪೂಜಿಸದ ಪಶುಜೀವನದ ಜನ ಇದ್ದರೇನು ಇಲ್ಲದಿದ್ದರೇನು. ಭಗವಂತನ ಪೂಜೆಯನ್ನು ಏಕೆ ಮಾಡಬೇಕು? ನಮಗೆ ಸರ್ವಾವಯವಗಳಿಂದ ಕೂಡಿದ ಶರೀರವನ್ನು ಕೊಟ್ಟು, ನಮ್ಮ ಯೋಗ್ಯತಾನು ಸಾರ ಈ ಜನ್ಮದಲ್ಲಿ ವಿದ್ಯೆಯನ್ನು, ಉದ್ಯೋಗವನ್ನು ಕೊಟ್ಟು, ಹೆಂಡತಿ–ಮಕ್ಕಳ ಪರಿವಾರವನ್ನೂ, ಅದನ್ನು ಅನುಭವಿಸಲು ಬೇಕಾದ ಮನೆ–ಆರೋಗ್ಯ ಭಾಗ್ಯಗಳನ್ನು ಕೊಟ್ಟು ಸದಾ ಸಲಹುತ್ತಿರುವ ಆ ಭಗವಂತನನ್ನು ಅವನ ಆದೇಶದಂತೆ ಸದಾ ಸ್ಮರಿಸುತ್ತಾ ವರ್ಣಾಶ್ರಮೋಚಿತ ಕರ್ಮಗಳನ್ನು ಅವನ ಪ್ರೀತಿಗಾಗಿ ಆಚರಿಸುತ್ತಾ ಪ್ರತಿನಿತ್ಯ ಪೂಜೆ ಮಾಡದಿದ್ದರೆ, ಅವನ ಈ ಉಪಕಾರಗಳನ್ನು ಸ್ಮರಿಸದಿದ್ದರೆ ನಾವು ಕೃತಘ್ನರಾಗುತ್ತೇವೆ. '**ಕೃತಘ್ನೇ ನಾಸ್ತಿ ನಿಷ್ಕೃತಿಃ**' –ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ ಎಂದಿದೆ.

ನಮ್ಮ ಪೂಜೆಯಿಂದ ದೇವರಿಗೆ ಏನೂ ಆಗಬೇಕಾಗಿಲ್ಲ. ನಾವು ಪ್ರತಿನಿತ್ಯ ಮಾಡಬೇಕಾದ ಪಂಚಯಜ್ಞದಲ್ಲಿ ದೇವಯಜ್ಞ ಎಂಬ ದೇವರ ಪೂಜೆ, ನಿತ್ಯೌಪಾಸನ, ವೈಶ್ವದೇವಹೋಮಗಳು ಸೇರಿದ್ದರಿಂದ ಇದನ್ನು ನಮ್ಮ ಕರ್ತವ್ಯವೆಂದು ಶ್ರೀಹರಿಪ್ರೀತಿಗಾಗಿ ನಿತ್ಯ ಮಾಡಲೇಬೇಕು.

**ನಾಸ್ತಿ ಶ್ರೇಯಸ್ಕರಂ ನೄಣಾಂ ವಿಷ್ಣೋರಾರಾಧನಾನ್ಮನೇ ।**
**ಯುಗೇಽಸ್ಮಿನ್ ತಾಮಸೇ ಲೋಕೇ ಸತತಂ ಪೂಜ್ಯತೇ ನೃಭಿಃ ॥** –ಕೃ.ಮ.

ತಾಮಸಗುಣವೇ ಬಲಿತಿರುವ ಈ ಕಲಿಯುಗದಲ್ಲಿ ಭಗವಂತನ ಭಜನೆ, ಪೂಜೆಯಲ್ಲದೆ ಶ್ರೇಯಸ್ಸಿನ ದಾರಿ ಬೇರೆಯಿಲ್ಲ. ಆದ್ದರಿಂದ ವಿವೇಕಿಗಳು ಪ್ರತಿನಿತ್ಯ ಶ್ರೀವಿಷ್ಣುವನ್ನೇ ಪೂಜಿಸುತ್ತಾರೆ.

**ಸಮಸ್ತಲೋಕನಾಥಸ್ಯ ದೇವದೇವಸ್ಯ ಶಾರ್ಙ್ಗಿಣಃ ।**
**ಸಾಕ್ಷಾದ್ಭಗವತೋ ವಿಷ್ಣೋಃ ಪೂಜನಂ ಜನ್ಮನಃ ಫಲಮ್ ॥** –ಕೃ.ಮ.

ಜಗತ್ತಿಗೆ ಸ್ವಾಮಿ ಎನಿಸಿದ ಸರ್ವಜ್ಞನಾದ ಶ್ರೀಹರಿಯನ್ನು ಪೂಜಿಸುವುದೇ ಮನುಷ್ಯನಾಗಿ ಹುಟ್ಟಿದ್ದಕ್ಕೆ ಸಾರ್ಥಕ್ಯ

**ಭಕ್ತ್ಯಾ ದೂರ್ವಾಂಕುರೈಃ ಪುಂಭಿಃ ಪೂಜಿತಃ ಪುರುಷೋತ್ತಮಃ ।**
**ಹರಿರ್ದದಾತಿ ಹಿ ಫಲಂ ಸರ್ವಯಜ್ಞೈಶ್ಚ ದುರ್ಲಭಮ್ ॥** –ಕೃ.ಮ.

ಗರಿಕೆಯ ಕುಡಿಯಿಂದಲೇ ಆದರೂ ಭಕ್ತಿಯಿಂದ ಪೂಜಿಸಲ್ಪಟ್ಟಾಗ ಜಗನ್ನಾಥನಾದ ಭಗವಂತನು ಕೊಡುವ ಫಲ ಎಲ್ಲ ಯಜ್ಞಯಾಗಾದಿಗಳ ಫಲವನ್ನು ಮೀರಿಸುವಂಥದ್ದು.

**ನರಕೇ ಪಚ್ಯಮಾನಸ್ತು ಯಮೇನ ಪರಿಭಾಷಿತಃ ।**
**ಕಿಂ ತ್ವಯಾ ನಾರ್ಚಿತೋ ದೇವಃ ಕೇಶವಃ ಕ್ಲೇಶನಾಶನಃ ॥** –ಕೃ.ಮ.

ನರಕಯಾತನೆಯನ್ನು ಅನುಭವಿಸುತ್ತಿದ್ದ ಒಬ್ಬ ನಾರಕಿಯೊಡನೆ ಯಮನು ಹೀಗೆ ಕೇಳಿದನು– "ಕ್ಲೇಶನಾಶನಾದ ಕೇಶವನನ್ನು ನೀನು ಯಾಕೆ ಪೂಜಿಸಲಿಲ್ಲ?"

**ದ್ರವ್ಯಾಣಾಮಪ್ಯಭಾವೇ ತು ಸಲಿಲೇನಾಽಪಿ ಪೂಜಿತಃ ।**
**ಯೋ ದದಾತಿ ಸ್ವಕಂ ಸ್ಥಾನಂ ಸ ತ್ವಯಾ ಕಿಂ ನ ಪೂಜಿತಃ ॥** –ಕೃ.ಮ.

ಸಂಪತ್ತಿನ ಸಡಗರವೇ ಇಲ್ಲದೆ ನೀರಿನ ತುಟುಕಿನಿಂದಲೇ ತೃಪ್ತಿಗೊಂಡು ಪರಮಪದವನ್ನೀವ ಕರುಣಾಳು ಶ್ರೀಹರಿಯನ್ನು ನೀನೇಕೆ ಪೂಜಿಸಲಿಲ್ಲ? ಎಂದು ಯಮನು ಕೇಳುತ್ತಾನೆ.

**ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಪಾಯಸ್ತು ವಿದ್ಯತೇ ।**
**ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ ॥** –ಕೃ.ಮ.

ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಯಾವುದೇ ಒಂದು ಪುರುಷಾರ್ಥವನ್ನು ಪಡೆಯಲು ಭಗವತ್ಪೂಜೆಯ ವಿನಾ ಬೇರೆ ಯಾವ ಉಪಾಯವೇ ಇಲ್ಲ.

**ಯೇಽರ್ಚಯಂತಿ ಸದಾ ವಿಷ್ಣುಂ ಶಂಖಚಕ್ರಗದಾಧರಮ್ ॥**
**ಸರ್ವಪಾಪವಿನಿರ್ಮುಕ್ತಾಃ ಪರಂ ಬ್ರಹ್ಮ ವಿಶಂತಿ ತೇ ॥** –ಕೃ.ಮ

ಶಂಖ, ಚಕ್ರ, ಗದಾಧಾರಿಯಾದ ಶ್ರೀಕೃಷ್ಣನನ್ನು ಎಂದೆಂದೂ ಪರಮಭಕ್ತಿಯಿಂದ ಪೂಜಿಸುವ ಭಕ್ತರು ಸರ್ವಪಾಪನಿರ್ಮುಕ್ತರಾಗಿ ಪರಬ್ರಹ್ಮಸ್ವರೂಪಿಯಾದ ಶ್ರೀಕೃಷ್ಣನನ್ನೇ (ಮುಕ್ತಿಯನ್ನೇ) ಹೊಂದುತ್ತಾರೆ.

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ಸದಾ ।**

ಶ್ರೀಹರಿಯ ಪೂಜೆಯ ಮಧ್ಯೆ ಮಧ್ಯೆ ಹರಿಸ್ಮರಣೆ ಮಾಡುತ್ತಿರಬೇಕು. ಹರಿಸ್ಮರಣೆ ಮಾಡದ ಪೂಜೆಯು ಆಸುರೀ(ಅಸುರರ ಪಾಲಿಗೆ ಸೇರುವ)ಪೂಜೆಯೆನಿಸುವುದು.

**ಭಕ್ಷ್ಯಾಣಿ ಚಾಗ್ನಿಕೋಣೇ ತು ನೈರ್ಋತ್ಯಾಂ ಪಾಯಸಂ ನ್ಯಸೇತ್ ।**
**ವಾಯವ್ಯಾಮುಪಭೋಜ್ಯಂ ಚ ಐಶಾನ್ಯಾಂ ಶಾಕಮೇವ ಚ ।**
**ಮಧ್ಯೇ ಚರುಂ ನಿಕ್ಷಿಪ್ಯ ಘೃತಪಾತ್ರಂ ಸಮಾವಿಶೇತ್ ॥**

ದೇವರಪೂಜೆಯಲ್ಲಿ ದೇವರ ಬಲಭಾಗದಲ್ಲಿ ಗೋಮಯದಿಂದ ನೆಲಕ್ಕೆ ಪ್ರೋಕ್ಷಿಸಿ ಎರಡು ಚತುರಸ್ರಮಂಡಲ ಮಾಡಿ ರಂಗೋಲೆಯಲ್ಲಿ ಮಧ್ಯದಲ್ಲಿ 'ಶ್ರೀಃ' ಎಂದು ಬರೆದು, ಒಂದು ಮಂಡಲದಲ್ಲಿ ಹಾಲು, ಮೊಸರು, ತುಪ್ಪ (ಬೇರೆ ಫಲವಸ್ತುಗಳಿದ್ದರೆ ಅವನ್ನೂ), ಬೆಲ್ಲ, ನೀರು, ತಾಂಬೂಲಾದಿಗಳನ್ನು, ಎರಡನೇ ಮಂಡಲದಲ್ಲಿ ಮಧ್ಯದಲ್ಲಿ ನೈವೇದ್ಯ, ಆಗ್ನೇಯದಲ್ಲಿ ಭಕ್ಷ್ಯಗಳು, ನೈಋತ್ಯದಲ್ಲಿ ಪಾಯಸ, ವಾಯವ್ಯದಲ್ಲಿ ಕೋಸಂಬ್ರಿ ಪಲ್ಯಗಳು, ಈಶಾನ್ಯದಲ್ಲಿ ಸಾರು, ಹುಳಿ ಇತ್ಯಾದಿಗಳನ್ನು ಇಟ್ಟು ತುಪ್ಪದಿಂದ (ಅಥವಾ ದನದ ಹಾಲಿನಿಂದ) ಅಭಿಘಾರ ಮಾಡಬೇಕು. ಸಲ್ಪ ದೂರದಲ್ಲಿ ಸಣ್ಣ ಎರಡು ತಟ್ಟೆಗಳು ಅಥವಾ ಎಲೆಯ ತುಂಡಿನಲ್ಲಿ ವೈಶ್ವದೇವಕ್ಕೂ ವಿಷ್ವಕ್ಸೇನನಿಗೂ ನೈವೇದ್ಯ ತೆಗೆದಿಡಬೇಕು. ಧೂಪ–ದೀಪದ ಅನಂತರ ಎಡಗೈಯಲ್ಲಿ ಉದ್ಧರಣೆಯಲ್ಲಿ ನೀರು ಹಿಡಿದುಕೊಂಡು ಬಲಗೈಯಲ್ಲಿ ತುಳಸಿ ಹಿಡಿದುಕೊಂಡು ಉದ್ಧರಣೆಯ ನೀರನ್ನು ಮೂಲಮಂತ್ರದಿಂದ ಅಭಿಮಂತ್ರಿಸಿ, '**ಓಂ ಭೂರ್ಭುವಸ್ಸುವಃ**' ಎಂದು ಪದಾರ್ಥಗಳಿಗೆ ಪ್ರೋಕ್ಷಿಸಿ, '**ಸತ್ಯಂತ್ವರ್ತೇನ ಪರಿಷಿಂಚಾಮಿ**' ಎಂದು ಪದಾರ್ಥಗಳಿಗೆ

ಪರಿಷೇಕಮಾಡಿ. '**ಯಾವಾಂಕಾ...**' ಎಂಬ ಮಂತ್ರದಿಂದ ಅಭಿಮಂತ್ರಿಸಿ, ದ್ವಾದಶಸ್ತೋತ್ರ ಪಠಿಸುತ್ತಾ ಎಲ್ಲಾ ಪದಾರ್ಥಗಳಿಗೂ ತುಳಸೀದಳ ಹಾಕಿ. 'ಭಾರತೀರಮಣಮುಖ್ಯಪ್ರಾಣಾಂತರ್ಗತ ಸಶ್ರೀಕಾಯ ಶ್ರೀಲಕ್ಷ್ಮೀ-ನಾರಾಯಣಾಯ ಸ್ವಾಹಾ. ಸಸೋಪಸ್ಕರಂ ಮಹಾನೈವೇದ್ಯಂ ಸಮರ್ಪಯಾಮಿ' ಎಂದು ತುಳಸಿಯನ್ನು ಶ್ರೀದೇವರಿಗೆ ಹಾಕಬೇಕು. ಈ ಪದಾರ್ಥಗಳಿಗೆಲ್ಲಾ ಅಭಿಮಾನಿ ದೇವತೆಗಳಿದ್ದಾರೆ. ಅವರ ಅಂತರ್ಗತ ಭಾರತೀ-ರಮಣಮುಖ್ಯಪ್ರಾಣಾಂತರ್ಗತ ಭಗವದ್ರೂಪಗಳು ಬೇರೆ ಬೇರೆ ಇವೆ.

**ಅನ್ನಾಭಿಮಾನೀ ಚಂದಸ್ತು ವಿಚಿಂತ್ಯಸ್ತತ್ರ ಕೇಶವಃ ॥** –ಪಂ.ರಾ.ಆ.

ಅನ್ನಾಭಿಮಾನಿ ಚಂದ್ರನ ಅಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಕೇಶವನಿದ್ದಾನೆ. ಪಂಚರಾತ್ರಾಗಮದ ಒಂದು ಅಧ್ಯಾಯದಲ್ಲಿ ಎಲ್ಲಾ ಪದಾರ್ಥಗಳ ಅಭಿಮಾನಿದೇವತೆ, ತದಂತರ್ಗತಭಗವದ್ರೂಪಗಳನ್ನೂ ಹೇಳಿದೆ. ಇದನ್ನೇ ಹರಿಕಥಾಮೃತಸಾರದಲ್ಲಿಯೂ ಹೇಳಿದ್ದಾರೆ. ಇದನ್ನು ನೋಡಿ ತಿಳಿದುಕೊಳ್ಳಬೇಕು. '**ಅಮೃತೋಪಸ್ತರಣಮಸಿ ಸ್ವಾಹಾ, ಪ್ರಾಣಾಯ ಸ್ವಾಹಾ, ಅನಿರುದ್ಧಾಯ ಇದಂ ನ ಮಮ**' ಇತ್ಯಾದಿಗಳನ್ನು ಅರ್ಪಿಸಿ, ಮುಖವನ್ನು ವಸ್ತ್ರದಲ್ಲಿ ಅಥವಾ ಎರಡು ಕೈಗಳಲ್ಲಿ ಮುಚ್ಚಿ, ಕಣ್ಣು ಮುಚ್ಚಿಕೊಂಡು ಮೂಲಮಂತ್ರವನ್ನು ಜಪಿಸುತ್ತಿರುವಾಗ ಈ ಪದಾರ್ಥಗಳಲ್ಲಿರುವ ಭಗವದ್ರೂಪಗಳನ್ನೂ, ಪ್ರತಿಮೆಯಲ್ಲಿ ಸನ್ನಿಹಿತನಾದ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಭಗವದ್ರೂಪವನ್ನೂ, ತನ್ನಲ್ಲಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಬಿಂಬರೂಪಿ ಪರಮಾತ್ಮನನ್ನ ಚಿಂತಿಸುತ್ತಾ ಐಕ್ಯಚಿಂತನೆ ಮಾಡುವುದೇ ಸಮರ್ಪಣೆ. ಸಮರ್ಪಿಸುವಾಗ,

**ನೈವೇದ್ಯಂ ಪುರತೋ ನ್ಯಸ್ತಂ ದೃಷ್ಟ್ಯೈವ ಸ್ವೀಕರೋಮ್ಯಹಮ್ ।**
**ರಸಂ ವಿಪ್ರಾಗ್ನಿಜಿಹ್ವಾಯಾಮಶ್ನಾಮಿ ಕಮಲಾಸನ ॥** –ಪಂ.ರಾ.ಆ.

ಮುಂಭಾಗದಲ್ಲಿಟ್ಟ ಪದಾರ್ಥಗಳ ಸಾರವನ್ನು ತಾನು ದೃಷ್ಟಿಯಿಂದ ಸ್ವೀಕರಿಸುತ್ತೇನೆ. ಅದರ ರಸವನ್ನು ಅಗ್ನಿಯ ಮುಖದಿಂದಲೂ, ಬ್ರಾಹ್ಮಣಮುಖದಿಂದಲೂ ಸ್ವೀಕರಿಸುತ್ತೇನೆ ಎಂದು ಬ್ರಹ್ಮನಿಗೆ ಹಂಸರೂಪಿಪರಮಾತ್ಮನು ಹೇಳುವ ಮಾತಿದು.

ನೈವೇದ್ಯ ಸಮರ್ಪಣೆ ಮಾಡಿ, ಅಗ್ನಿಯಲ್ಲಿ ಅನುಯಾಗ ಮಾಡಿ, ಹಾಗೆಯೇ ಬಂದು ಬ್ರಾಹ್ಮಣ ಹಸ್ತೋದಕ ಕೊಡಬೇಕು. ಉತ್ತರಾಪೋಶನವನ್ನು ಕೊಟ್ಟು ನೈವೇದ್ಯ ವಿಸರ್ಜನೆ ಮಾಡಿ, 'ಮೂಲೇನ ತ್ರಿಃ ಸಮರ್ಚಯೇತ್' (ತಂ.ಸಾ.) ಮೂಲಮಂತ್ರದಿಂದ ಮೂರಾವರ್ತಿ ತುಳಸಿ ಅಥವಾ ಪುಷ್ಪಾರ್ಚನೆ ಮಾಡಿ ಪೂಜೆ ಮಾಡಬೇಕು.

ಹಿಂದೆ ಹೇಳಿದ ಪ್ರಕಾರ ಮೂರು ಕಡೆಗಳಲ್ಲಿಯೂ ಏಕಕಾಲದಲ್ಲಿ ದೇವರಿಗೆ ನೈವೇದ್ಯ ಸಮರ್ಪಣೆ ನಡೆಯಬೇಕು. ಈ ಮೂರರಲ್ಲಿ ಬ್ರಾಹ್ಮಣಮುಖದಲ್ಲಿ ಪ್ರಾಣಾಗ್ನಿ ಹೋತ್ರರೂಪದಲ್ಲಿ ಕೊಟ್ಟಂತಹ ಆಹುತಿಯಲ್ಲಿ ದೇವರಿಗೆ ತೃಪ್ತಿ ಆದಂತೆ, ಅಗ್ನಿಮುಖದಲ್ಲಿಯೂ, ಪ್ರತಿಮಾಮಾಧ್ಯಮದಲ್ಲಿಯೂ ಕೊಟ್ಟದ್ದರಲ್ಲಿ ತೃಪ್ತಿ ಆಗುವುದಿಲ್ಲ.

**ಅಶ್ನಾತ್ಯನಂತಃ ಖಲು ತತ್ವಕೋವಿದೈಃ ಶ್ರದ್ಧಾಹುತಂ ಯನ್ಮುಖ ಇಜ್ಯನಾಮಭಿಃ ।**
**ನ ವೈ ತಥಾ ಚೇತನಯಾ ಬಹಿಷ್ಕೃತೇ ಹುತಾಶನೇ ಪಾರಮಹಂಸ್ಯವರ್ಯಗುಃ ॥**
–ಭಾಗ.ಸ್ಕಂ ೪, ಅ. ೨೧, ಶ್ಲೋ. ೪೨

**ತತ್ವಕೋವಿದೈಃ**– ಭಗವತ್ತತ್ವಜ್ಞಾನಿಗಳಿಂದ, **ಇಜ್ಯನಾಮಭಿಃ**– ಪೂಜ್ಯನಾದ ಶ್ರೀಹರಿಯ ನಾಮಗಳನ್ನುಚ್ಚರಿಸುತ್ತಾ, **ಯನ್ಮುಖೇ**–ಬ್ರಾಹ್ಮಣರ ಮುಖದಲ್ಲಿ, **ಶ್ರದ್ಧಾಹುತೋ**–ಶ್ರದ್ಧೆಯಿಂದ ಹೋಮ ಮಾಡಲ್ಪಟ್ಟದ್ದನ್ನು, **ಅನಂತಃ**– ಭಗವಂತನು, **ಅಶ್ನಾತಿ ಖಲು**– ಸ್ವೀಕರಿಸುವನಷ್ಟೇ. **ಚೇತನಯಾ ಬಹಿಷ್ಕೃತೇ**–ಚೇತನರಹಿತವಾದ (ಜಡವಾದ), **ಹುತಾಶನೇ**– ಅಗ್ನಿಯಲ್ಲಿ, (ಹುತಂ– ಹೋಮ ಮಾಡಿದ್ದನ್ನು), **ಪಾರಮಹಂಸ್ಯವರ್ಯಗುಃ** – ತತ್ವಜ್ಞಾನಿಗಳಾದ

ಪರಮಹಂಸಾಶ್ರಮಿಗಳಿಂದ ಆದರಿಸಲ್ಪಟ್ಟ ನಾಮಗಳುಳ್ಳ ಶ್ರೀಹರಿಯು, **ತಥಾ**–ಜ್ಞಾನಿಗಳ ಮುಖರೂಪವಾದ ಅಗ್ನಿಯಲ್ಲಿ ಕೊಟ್ಟದ್ದನ್ನು ಸ್ವೀಕರಿಸುವಂತೆ, ನ ವೈ– ಎಂದಿಗೂ ಸ್ವೀಕರಿಸುವುದಿಲ್ಲ.

ಪದಾರ್ಥಗಳನ್ನು ಸಮರ್ಪಣೆ ಮಾಡುವಾಗ, ಪದಾರ್ಥಗಳಿಗೆ ತುಪ್ಪದಿಂದ ಅಭಿಘಾರ ಮಾಡಿ ತುಳಸಿ ಹಾಕಬೇಕು. ತುಪ್ಪದ ಅಭಿಘಾರದಿಂದಲೂ ತುಳಸಿಯಿಂದಲೂ ಪದಾರ್ಥಗಳ ಶುದ್ಧಿ (ತುಪ್ಪಕ್ಕೂ ತಾಂಬೂಲಕ್ಕೂ ಲಕ್ಷ್ಮಿಯ ಸನ್ನಿಧಾನ ಇರುವುದರಿಂದ, ಲಕ್ಷ್ಮೀದ್ವಾರಾ ಈ ಪದಾರ್ಥಗಳನ್ನು ದೇವರಿಗೆ ಅರ್ಪಿಸುತ್ತೇನೆಂದು ಅನುಸಂಧಾನ ಮಾಡಿಕೊಳ್ಳಬೇಕು. ದೇವರ ಪೂಜೆಗೆ ಯಾವ ಪದಾರ್ಥಗಳು ಎಷ್ಟಿದ್ದರೂ 'ತುಳಸಿ ಇಲ್ಲದೆ ಪೂಜೆಗೊಳ್ಳನೋ ಹರಿಗೊಳ್ಳನೋ' (ಪುರಂದರದಾಸರು). ಆದ್ದರಿಂದ ಶ್ರೀಹರಿಯ ಪೂಜೆಯಲ್ಲಿ ತುಳಸಿ ಬಹಳ ಮುಖ್ಯ.

ದೇವರ ಸಮರ್ಪಣೆಯ ಅನಂತರ ಮೊದಲು ವಿಷ್ವಕ್ಸೇನನಿಗೆಂದು ಪ್ರತ್ಯೇಕ ತೆಗೆದಿಟ್ಟ ನೈವೇದ್ಯಕ್ಕೆ ತೀರ್ಥನಿರ್ಮಾಲ್ಯ ಹಾಕಿ, 'ವಿಷ್ವಕ್ಸೇನಾಯ ಸ್ವಾಹಾ, ವಿಷ್ಣ್ವರ್ಪಿತ–ನೈವೇದ್ಯಶೇಷಂ ಸಮರ್ಪಯಾಮಿ' ಎಂದು ಹೇಳಿ ಕೈತೊಳೆದುಕೊಳ್ಳಬೇಕು. ನನಗೆ ಸಮರ್ಪಣೆ ಆದೊಡನೆ ನಿನಗೆ ಪ್ರತ್ಯೇಕ ಸಮರ್ಪಿಸಲಿ ಎಂದು ವಿಷ್ವಕ್ಸೇನನಿಗೆ ದೇವರ ವರ ಇರುವುದರಿಂದ ದೇವರ ಸಮರ್ಪಣೆ ಆದೊಡನೆ ಮೊದಲು ವಿಷ್ವಕ್ಸೇನನಿಗೆ ನೈವೇದ್ಯಶೇಷವನ್ನು ಸಮರ್ಪಿಸಬೇಕು. ಹೀಗೆ ಸಮರ್ಪಣೆ ಮಾಡದಿದ್ದರೆ ನೀನೇ ಎಲ್ಲವನ್ನೂ ಸ್ವೀಕರಿಸು ಎಂದು ದೇವರು ವರ ಕೊಟ್ಟಿದ್ದಾರೆ.

ಆಮೇಲೆ '**ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ**.....' ಎಂಬ ಮಂತ್ರ **ಹೇಳಿ** ಮುಖ್ಯಪ್ರಾಣದೇವರಿಗೆ ಮೂರುಸಲ ತೀರ್ಥ ಕೊಟ್ಟು, ಗಂಧನಿರ್ಮಾಲ್ಯ ಹಾಕಿ, '**ಮಾತರ್ಮೇ ಮಾತರಿಶ್ವನ್**....' ಎಂದು ಹೇಳುತ್ತಾ ಎಲ್ಲ ಪದಾರ್ಥಗಳಿಗೂ ತೀರ್ಥ ನಿರ್ಮಾಲ್ಯ ಹಾಕಿ 'ಭಾರತೀರಮಣಮುಖ್ಯಪ್ರಾಣಾಯ ಸ್ವಾಹಾ, ವಿಷ್ಣ್ವರ್ಪಿತಂ ಮಹಾನೈವೇದ್ಯಂ ಸಮರ್ಪಯಾಮಿ' ಎಂದು ಪ್ರಾಣದೇವರಿಗೆ ನಿರ್ಮಾಲ್ಯ ಹಾಕಿ 'ಓಂ ಪ್ರಾಣಾಯ ನಮಃ.....' ಇತ್ಯಾದಿ ಪ್ರಾಣಮಂತ್ರ ಜಪಿಸಬೇಕು. ಗರುಡ, ಶೇಷರಿಗೂ ತೀರ್ಥನಿರ್ಮಾಲ್ಯ ಹಾಕಬೇಕು. ಆಮೇಲೆ ಘಂಟಾನಾದ ಮಾಡಿ, ನೈವೇದ್ಯ ತೆಗೆದು, ಶುದ್ಧಿಮಾಡಬೇಕು. ಪುರುಷಸೂಕ್ತ, ವಿಷ್ಣುಸೂಕ್ತ ಹೇಳಿ ಮಂತ್ರಪುಷ್ಪ ಸಮರ್ಪಿಸಿ, ನೀರಾಜನವನ್ನು ಮಾಡಬೇಕು. ಮಂಗಳಾರತಿ ಮಾಡುವಾಗ ಎಡಕೈಯಲ್ಲಿ ಘಂಟಾನಾದ ಮಾಡುತ್ತಾ ಬಲಕೈಯಲ್ಲಿ ತುಳಸಿಸಹಿತ ಆರತಿ ಹಿಡಿದುಕೊಂಡು ಆರತಿಯನ್ನು ಶಂಖಕ್ಕೆ ಮುಟ್ಟಿಸಿ ಮೊದಲು ದೇವರ ಪಾದಭಾಗದಲ್ಲಿ ಮೂರುಸುತ್ತು ಆಮೇಲೆ ಮಧ್ಯಭಾಗದಲ್ಲಿ ಮೂರುಸುತ್ತು ಅನಂತರ ಮುಖಭಾಗದಲ್ಲಿ ಮೂರು ಸುತ್ತು ಕೊನೆಗೆ ಇಡೀ ಪೀಠಕ್ಕೆ ಮೂರುಸುತ್ತು ದೇವರ ಮುಖಕ್ಕೆ ತೋರಿಸಿ ಕೆಳಗಿಡಬೇಕು. ಹೀಗೆ ಈ ೧೨ ಸುತ್ತಿಗೆ ಕೇಶವಾದಿ ದ್ವಾದಶ ಮೂರ್ತಿಗಳ ಚಿಂತನೆಯನ್ನು ಮಾಡುತ್ತಿರಬೇಕು.

ದೇವರಿಗೆ 'ತ್ರಿಧಾಮಾ' ಎಂದು ಹೆಸರು. ಅಂದರೆ ಮೂರು ಕಡೆಗಳಲ್ಲಿ ಧಾಮ(ಮನೆ) ಇದ್ದವನು. ವೈಕುಂಠ, ಶ್ವೇತದ್ವೀಪ ಹಾಗೂ ಅನಂತಾಸನ. ಆದ್ದರಿಂದ ಪೀಠಕ್ಕೆ ಮೂರು ಅಂತಸ್ತು. ಈ ಮೂರು ಕಡೆಯಲ್ಲಿದ್ದ ಶ್ರೀಹರಿಗೆ ಪೂಜೆ ಮಾಡುತ್ತೇವೆ ಎಂಬ ಅನುಸಂಧಾನ ಮಾಡಿ, ಪೂಜೆ ಮಾಡುವುದು. ಆರತಿ ಮಾಡುವಾಗ ತುಳಸಿಸಹಿತ ಆರತಿಯನ್ನು ಶಂಖಕ್ಕೆ ಮುಟ್ಟಿಸಿ ಆರತಿ ಮಾಡುವುದು ಈ ಎರಡರಲ್ಲಿಯೂ ಲಕ್ಷ್ಮೀಸನ್ನಿಧಾನ ಇರುವುದರಿಂದ ಲಕ್ಷ್ಮೀದ್ವಾರಾ ಆರತಿ ಮಾಡುತ್ತೇನೆಂದು ಅನುಸಂಧಾನ ಮಾಡಿಕೊಳ್ಳಬೇಕು. ಆರತಿ ಕೆಳಗಿಟ್ಟು, ಕೈತೊಳೆದು ಅರ್ಘ್ಯ ಕೊಟ್ಟು ಪುನಃ ತುಳಸಿ ಸಮರ್ಪಿಸಿ, ಇನ್ನೊಂದು ಆರತಿ ಮಾಡಬೇಕು. ಮಾಡಿದ ಆರತಿಯ ಬತ್ತಿಯನ್ನು ಕಬ್ಬಿಣದ ಸೌಟಿನಲ್ಲಿ ಹಾಕಬೇಕು. ಇದಕ್ಕೆ ಯಮ ಅಭಿಮಾನಿದೇವತೆ. ಇದರಲ್ಲಿಯೇ ಆರತಿ ಕೊಡಬೇಕು. ಅನಂತರ, ಛತ್ರ–ಚಾಮರಾದಿಗಳನ್ನು ತೋರಿಸಿ ಪುನಃ ಮೂರುಸಲ ಮೂಲಮಂತ್ರದಿಂದ ಅರ್ಚನೆ ಮಾಡಿ, '**ಬಿಂಬಛಾಯಾದೋಷಪರಿಹಾರಾರ್ಥಂ ಶಂಖಭ್ರಮಣಂ ಕರಿಷ್ಯೇ**' ಎಂದು ಹೇಳಿ ಶಂಖಕ್ಕೆ

ನೀರು ತುಂಬಿಸಿ ಮೂಲಮಂತ್ರ ಹೇಳಿ ದೇವರಿಗೆ ಮೂರು ಸಲ ಸುತ್ತಿ ಬೇರೆ ಸಣ್ಣ ತಟ್ಟೆಗೆ ಆ ನೀರನ್ನು ಹಾಕಿಡಬೇಕು.

**ತ್ರಿವಾರಂ ಭ್ರಾಮಿತಂ ತೋಯಂ ಮಂತ್ರಿತಂ ಕೇಶವೋಪರಿ ।**
**ಶಂಖತೀರ್ಥಮಿತಿ ಪ್ರಾಹುಃ ಸರ್ವಾಂಗೇ ಪ್ರೋಕ್ಷಯೇಚ್ಚ ತತ್ ॥**

ಇದೇ ಶಂಖತೀರ್ಥ. ಇದನ್ನು ನಮ್ಮ ದೇಹದ ಮೇಲೆ ಪ್ರೋಕ್ಷಣೆ ಮಾಡಿಕೊಳ್ಳಬೇಕು.

**ರಮಾಬ್ರಹ್ಮಾದಯೋ ದೇವಾಃ ಸನಕಾದ್ಯಾಃ ಶುಕಾದಯಃ ।**
**ಶ್ರೀನೃಸಿಂಹಪ್ರಸಾದೋಽಯಂ ಸರ್ವೇ ಗೃಹ್ಣಂತು ವೈಷ್ಣವಾಃ ॥**

ರಮಾಬ್ರಹ್ಮಾದಿದೇವತೆಗಳೂ, ಸನಕಾದಿಗಳೂ, ಶುಕಾದಿಗಳೂ ಸಮಸ್ತ ವೈಷ್ಣವರೂ ಎಲ್ಲರೂ ಕೂಡ ಈ ಶ್ರೀನೃಸಿಂಹಪ್ರಸಾದವನ್ನು ಸ್ವೀಕರಿಸಲಿ ಎಂದು ಪ್ರಾರ್ಥಿಸಿಕೊಳ್ಳಬೇಕು. ಅನಂತರ ಶಂಖವನ್ನು ಕವುಚಿ ಇಟ್ಟು ಉತ್ತರಪೂಜೆ ಮಾಡಿ, ಪೂಜೆಯನ್ನು ಕೃಷ್ಣಾರ್ಪಣ ಬಿಟ್ಟು, ಮೂಲಮಂತ್ರ ಹೇಳುತ್ತ 'ಪ್ರಸೀದ ಭಗವನ್....' ಶ್ರೀಲಕ್ಷ್ಮೀನಾರಾಯಣಂ ಮಮ ಹೃತ್ಕಮಲೇ ಪ್ರವಾಹಯಾಮಿ' ಎಂದು ಒಂದು ತುಳಸಿಯನ್ನು ದೇವರ ಮೇಲಿಂದ ತೆಗೆದು ತನ್ನ ತಲೆಯಲ್ಲಿ ಇಟ್ಟುಕೊಳ್ಳಬೇಕು. ಆಮೇಲೆ ಘಂಟಾನಾದ ಮಾಡಿ, 'ಲಂ ಲಕ್ಷ್ಮ್ಯೈ ನಮಃ, ವಂ ವಾಯವೇ ನಮಃ, ರುದ್ರಶೇಷಗರುಡೇಭ್ಯೋ ನಮಃ' ಎಂದು ಹೇಳಿ ತೀರ್ಥವನ್ನು ಶಂಖಕ್ಕೂ, ಪ್ರಾಣ-ದೇವರಿಗೂ, ಘಂಟಾಮಣಿಗೂ, ರುದ್ರ-ಶೇಷ-ಗರುಡರಿಗೂ ಕೊಟ್ಟು ನಿರ್ಮಾಲ್ಯ ಇಡಬೇಕು. ಪೂಜೆಯನಂತರ ದೇವರಿಗೆ ಪ್ರದಕ್ಷಿಣೆ ನಮಸ್ಕಾರ ಮಾಡಬೇಕು.

**ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।**
**ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇಪದೇ ॥**

ಜನ್ಮಾಂತರಗಳಲ್ಲಿ ಮಾಡಿದ ಯಾವ ಯಾವ ಪಾಪಗಳಿವೆಯೋ ಅವೆಲ್ಲವೂ ಪ್ರದಕ್ಷಿಣ ಮಾಡುವ ಹಜ್ಜೆಹಜ್ಜೆಗೂ ನಾಶವಾಗುತ್ತವೆ.

**ಪ್ರದಕ್ಷಿಣಂ ತು ಯಃ ಕುರ್ಯಾದ್ಧರಿಂ ಭಕ್ತ್ಯಾ ಸಮನ್ವಿತಃ ।**
**ಹಂಸಯುಕ್ತವಿಮಾನೇನ ವಿಷ್ಣುಲೋಕಂ ಸ ಗಚ್ಛತಿ ॥** -ಕೃ.ಮ.

ಭಕ್ತಿಯಿಂದ ಭಗವಂತನಿಗೆ ಸುತ್ತುವರಿದವರು ಹಂಸಗಳು ಎಳೆವ ವಿಮಾನದಲ್ಲಿ ಕುಳಿತು ಮೋಕ್ಷಕ್ಕೆ ಹೋಗುವರು.

**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥** -ಕೃ.ಮ.

ಆ ಪ್ರಣಾಮವು ಎದೆ, ತಲೆ, ಕಣ್ಣು, ಮನಸ್ಸು, ಮಾತು, ಹಸ್ತ, ಪಾದ, ಜಾನು ಎಂದು ಎಂಟು ಅಂಗಗಳುಳ್ಳದ್ದು.

**ರೇಣುಕುಂಠಿತಗಾತ್ರಸ್ಯ ಕಣಾ ಯಾವಂತಿ ಭಾರತ ।**
**ತಾವದ್ವರ್ಷಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥** -ಕೃ.ಮ.

ವಿಷ್ಣುವನ್ನು ವಂದಿಸುವಾಗ ಮೈಯಲ್ಲಿ ಎಷ್ಟು ಧೂಳಿಕಣಗಳು ಅಂಟಿ ಕೊಳ್ಳುವವೋ ಅಷ್ಟು ಸಾವಿರ ವರ್ಷ ವಿಷ್ಣುಲೋಕದಲ್ಲಿ ಸುಖಿಸುವರು.

**ತ್ರಾಹಿ ತ್ರಾಹಿ ಜಗನ್ನಾಥ ವಾಸುದೇವಾಚ್ಯುತಾವ್ಯಯ ।**
**ಮಾಂ ಸಮುದ್ಧರ ಗೋವಿಂದ ದುಃಖಸಂಸಾರಸಾಗರಾತ್ ॥** -ಕೃ.ಮ.

ಅವಿನಾಶಿಯಾದ ಜಗದೊಡೆಯ ಗೋವಿಂದನೆ, ಹುಟ್ಟುಸಾವುಗಳೆಂಬ ಈ ಸಂಸಾರಸಾಗರದಿಂದ ನನ್ನನ್ನು ಪಾರುಮಾಡಿ ರಕ್ಷಿಸು. ಇತ್ಯಾದಿ ಮಂತ್ರ ಹೇಳಿ ಪ್ರತಿನಿತ್ಯ ತ್ರಿಕಾಲದಲ್ಲಿಯೂ ನಮಸ್ಕಾರ ಮಾಡಬೇಕು. ತನ್ನ ನಿತ್ಯೌಪಾಸನೆಯನ್ನು ಮಾಡಿಕೊಂಡು, ವೈಶ್ವದೇವ ಮಾಡಬೇಕು. ಅದೇ ಅಗ್ನಿಯಲ್ಲಿ,

**ಶ್ವಭ್ಯಶ್ಚ ಶ್ವಪತಿಭ್ಯಶ್ಚ ವಯೋಭ್ಯಶ್ಚಾವಪೇದ್ಭುವಿ ।**
**ವೈಶ್ವದೇವಂ ಹಿ ನಾಮೈತತ್ ಸಾಯಂ ಪ್ರಾತಶ್ಚ ದೀಯತೇ ॥**

**ವಿಶ್ವಂ = ಸರ್ವಜಾತೀಯಂ ಪ್ರಾಣಿಜಾತಂ, ದೇವಃ = ದೇವತಾ ಯಸ್ಮಿನ್ ಸಃ ವೈಶ್ವದೇವಃ ।**

ಪಶುಪಕ್ಷ್ಯಾದಿ ಸರ್ವಪ್ರಾಣಿಗಳ ತೃಪ್ತಿಯನ್ನುದ್ದೇಶಿಸಿ ಮಾಡುವ ಕರ್ಮವೇ ವೈಶ್ವದೇವ. ಇದು ಪಂಚಸೂನಾ-ದೋಷಪರಿಹಾರಕ್ಕಾಗಿ ಮಾಡುವ ಪಾಕಸಂಸ್ಕಾರವೂ ಆಗಿದೆ.

**ಖಂಡನೀ ಪೇಷಣೀ ಚುಲ್ಲೀ ಉದಕುಂಭೀ ಚ ಮಾರ್ಜನೀ ।**
**ಪಂಚಸೂನಾ ಗೃಹಸ್ಥಸ್ಯ ತಾಭಿಃ ಸ್ವರ್ಗಂ ನ ವಿಂದತಿ ॥**

ಖಂಡನ (ತುಂಡು ಮಾಡುವುದು), ಪೇಷಣ (ಅರೆಯುವುದು) ಚುಲ್ಲೀ (ಒಲೆಯಲ್ಲಿ ಹಾಕಿ ಸುಡುವುದು), ಭರ್ಜನ (ಹುರಿಯುವುದು), ಉದಕುಂಭ (ನೀರಿನಲ್ಲಿ ಅಥವಾ ಆವಿಯಲ್ಲಿ ಬೇಯಿಸುವುದು) – ಇವು ಐದು ಪಂಚಸೂನುಗಳು. ಧಾನ್ಯ, ಶಾಕಾದಿ ಆಹಾರಗಳನ್ನು ಸಿದ್ಧಪಡಿಸುವಾಗ, ಮೇಲೆ ಹೇಳಿರುವ ಐದು ವಿಧಾನಗಳಿಂದ, ಈ ಪದಾರ್ಥಗಳಲ್ಲಿರುವ ಅನೇಕ ಪ್ರಾಣಿಗಳ ಹಿಂಸಾದೋಷವಿರುತ್ತದೆ. ಈ ದೋಷವು ವೈಶ್ವದೇವದಿಂದ ಪರಿಹಾರವಾಗುತ್ತದೆ. ಈ ವೈಶ್ವದೇವವನ್ನು ಏಕಾದಶೀದಿವಸವೂ, ಶ್ರೀಕೃಷ್ಣಾಷ್ಟಮೀದಿವಸವೂ ಮಾಡುವುದಿಲ್ಲ.

ವೈಶ್ವದೇವದ ಅನಂತರ 'ಭೂತಾನಿ ಬಲಿಕರ್ಮಣಾ' ವೈಶ್ವದೇವದಲ್ಲಿ ಹಾಕುವ ಬಲಿಯೇ ಭೂತಯಜ್ಞ. ಈ ವೈಶ್ವದೇವವನ್ನು ಬ್ರಹ್ಮಚಾರಿಯು ಮಾಡಬಾರದು.

**ವೈಶ್ವದೇವಂ ಬಲಿಂ ದಂತಧಾವನಂ ಚಾಪ್ಯೃತೇ ವಟೋಃ ।** –ಸ.ಸ್ಮೃ.

ಬ್ರಹ್ಮಚಾರಿಗೆ ವೈಶ್ವದೇವ, ಬಲಿಹರಣ, ದಂತಧಾವನ (ಬೇರೆ ಬೇರೆ ಕಾಷ್ಠಗಳಿಂದ ಹಲ್ಲುಜ್ಜುವುದು) ಇವುಗಳನ್ನು ಬಿಟ್ಟು ಉಳಿದ ಹರಿದೀಕ್ಷಾ, ಸ್ನಾನ, ಸಂಧ್ಯಾವಂದನೆ, ಜಪ, ಅಗ್ನಿಕಾರ್ಯ, ಪೂಜೆ, ಭೋಜನ, ಶಾಸ್ತ್ರಾಭ್ಯಾಸ, ಹರಿಸ್ಮರಣಾದಿ ಕರ್ಮಗಳು ನಿತ್ಯದಲ್ಲೂ ಕರ್ತವ್ಯಗಳು. ಇಲ್ಲಿ ಬಲಿ ಎಂದು ಹೇಳಿದ್ದು ವೈಶ್ವದೇವದ ಬಲಿ ಒಂದಾದರೆ, ಭೋಜನ ಮಾಡುವಾಗ ಕೊಡುವ ಚಿತ್ರಾಹುತಿಯೂ ಬಲಿಯಲ್ಲಿಯೇ ಸೇರಿದ್ದರಿಂದ ನಮ್ಮ ತೌಳವದೇಶಾಚಾರದಲ್ಲಿ ಚಿತ್ರಾಹುತಿ ಕೊಡುವ ಪದ್ಧತಿ ಇಲ್ಲ.

ವೈಶ್ವದೇವ, ಬಲಿಹರಣದ ಅನಂತರ ಕಾಕಬಲಿ ಹಾಕಿ, ಕೈಕಾಲು ತೊಳೆದು ಕೊಂಡು, ಗೋದೋಹನದಷ್ಟು ಕಾಲ (ದನ ಕರೆಯುವಷ್ಟು ಕಾಲ) ಅತಿಥಿಗಳು ಯಾರಾದರೂ ಬರುತ್ತಾರೋ ಎಂದು ನೋಡಿ ಆ ಸಮಯದಲ್ಲಿ ಬಂದ ಅತಿಥಿ ಗಳನ್ನು ಸನ್ಮಾನಿಸಿ, ತೀರ್ಥಗಂಧಾದಿಗಳನ್ನು ಕೊಟ್ಟು, ಆದರದಿಂದ ಭೋಜನ ಮಾಡಿಸಬೇಕು. ಪಂಚಯಜ್ಞದಲ್ಲಿ ಇದೇ 'ಮನುಷ್ಯಯಜ್ಞ'. ಕುಲ ಗೋತ್ರ ಹೆಸರುಗಳು ನಮಗೆ ತಿಳಿಯದ, ಭೋಜನಕಾಲಕ್ಕೊದಗಿದ, ಹಸಿವುಳ್ಳ, ಭೋಜನವನ್ನು ಅಪೇಕ್ಷಿಸುವ, ಶಮದಮಾದಿ ಗುಣಗಳುಳ್ಳ ವೈಷ್ಣವ ಬ್ರಾಹ್ಮಣನಾದವನು ಉತ್ತಮ ಅತಿಥಿ.

## ಬ್ರಹ್ಮಯಜ್ಞ

ಬ್ರಹ್ಮಯಜ್ಞವನ್ನು ಮಾಧ್ಯಾಹ್ನಿಕ ಸಂಧ್ಯಾವಂದನೆಯ ಅನಂತರವೂ ಅಥವಾ ವೈಶ್ವದೇವದ ಅನಂತರವೂ

ಮಾಡಬಹುದು. ಇದನ್ನು ಏಕಾದಶೀ, ಕೃಷ್ಣಾಷ್ಟಮೀ ದಿನವೂ, ಗರ್ಭಾಧಾನಾದಿ ಶುಭಕರ್ಮಗಳಿಗೆ ಮಾಡತಕ್ಕ ನಾಂದೀಶ್ರಾದ್ಧದ ಅನಂತರ ಮಾತೃಕಾವಿಸರ್ಜನಪರ್ಯಂತವೂ ಮಾಡಕೂಡದು. ಇದೇ ಋಷಿಯಜ್ಞ, ಬ್ರಹ್ಮಯಜ್ಞದ ಅನಂತರ, ಉಪವೀತಿಯಾಗಿ ಪೂರ್ವಮುಖವಾಗಿ ಕುಳಿತುಕೊಂಡು ಬಲಕೈಯ ಸರ್ವಾಂಗುಲಿಯ ತುದಿಭಾಗದ ದೇವತೀರ್ಥದಲ್ಲಿ ಒಂದೊಂದು ದೇವತರ್ಪಣ ಕೊಡಬೇಕು. ಆಮೇಲೆ ಉಪವೀತವನ್ನು ಮಾಲಾಕಾರಮಾಡಿ, ಉತ್ತರಾಭಿಮುಖವಾಗಿ ಕುಳಿತುಕೊಂಡು ಅಂಗುಲಿಯ ವಾಮಭಾಗ ಕನಿಷ್ಠಿಕಾ ಮೂಲದ ಋಷಿತೀರ್ಥದಿಂದ ಋಷಿತರ್ಪಣ ಎರಡೆರಡು ಕೊಡಬೇಕು. ಆಮೇಲೆ ಅಧಿಕಾರ ಇದ್ದವರು, ಉಪವೀತವನ್ನು ಎಡಕ್ಕೆ ಹಾಕಿಕೊಂಡು ದಕ್ಷಿಣಾಭಿಮುಖವಾಗಿ ಕುಳಿತುಕೊಂಡು ಅಂಗುಷ್ಠ-ತರ್ಜನೀ-ಮಧ್ಯದ ಪಿತೃತೀರ್ಥದಿಂದ ದೇವರ ತೀರ್ಥ ಸಹಿತವಾಗಿ ಮೂರು ಮೂರು ಪಿತೃತರ್ಪಣ ಕೊಡಬೇಕು. ಇಲ್ಲಿ ಪಿತೃವರ್ಗ, ಮಾತೃವರ್ಗ, ಮಾತಾಮಹವರ್ಗ, ಮಾತಾಮಹಿವರ್ಗ –ಹೀಗೆ ನಾಲ್ಕು ವರ್ಗದವರಿಗೆ ಮೂರು ಮೂರು ತರ್ಪಣ, ಸಪತ್ನೀಮಾತೃವಿಗೆ (ತಂದೆಯ ಇನ್ನೊಬ್ಬ ಹೆಂಡತಿ) ಎರಡು ತರ್ಪಣ. ಬಾಕಿ ಎಲ್ಲ ಕಾರುಣ್ಯಪಿತೃಗಳಿಗೂ ಮೂರು ಮೂರು, ಹೆಂಗುಸರಿಗೆ ಒಂದೊಂದರಂತೆ ತರ್ಪಣ ಬಿಡಬೇಕು. ಯಜುರ್ವೇದಿಗಳು ದೇವತರ್ಪಣದ ಅನಂತರ, ಋಗ್ವೇದಿಗಳು ಪಿತೃತರ್ಪಣದ ಅನಂತರ ಉಪವೀತವನ್ನು ಬಲಕ್ಕೆ ಹಾಕಿಕೊಂಡು ಯಮಾದಿ ಹದಿನಾಲ್ಕು ದೇವತೆಗಳಿಗೆ ಒಂದೊಂದು ತರ್ಪಣ ಕೊಟ್ಟು, ಉಪವೀತವನ್ನು ಮಾಲಾಕಾರ ಮಾಡಿ ಉಪವೀತವನ್ನು ಹಿಡಿದುಕೊಂಡು,

**ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।**
**ತೇ ಗೃಹ್ಣಂತು ಮಯಾ ದತ್ತಂ ಸೂತ್ರನಿಷ್ಪೀಡನೋದಕಮ್ ॥**

ಎಂದು ನೀರನ್ನು ಬಿಟ್ಟು ಉಪವೀತವನ್ನು ಬಲಕ್ಕೆ ಹಾಕಿಕೊಂಡು ಈ ಬ್ರಹ್ಮಯಜ್ಞ, ದೇವರ್ಷಿ(ಪಿತೃ) ತರ್ಪಣವನ್ನು ಕೊಟ್ಟು, ಎರಡು ಸಲ ಆಚಮನ ಮಾಡಬೇಕು.

ದೇವರಪೂಜೆ, ಬ್ರಹ್ಮಯಜ್ಞದ ಅನಂತರ ದೇವತರ್ಪಣ ಕೊಟ್ಟಮೇಲೆ, ಋಗ್ವೇದಿಗಳು ಪಿತೃತರ್ಪಣ ಕೊಟ್ಟಮೇಲೆ, ಯಮಾದಿ ಹದಿನಾಲ್ಕು ದೇವತೆಗಳಿಗೆ ತರ್ಪಣ ಕೊಡಬೇಕು.

**ದಕ್ಷಿಣಾಭಿಮುಖೋ ಭೂತ್ವಾ ತಿಲೈಃ ಸವ್ಯೈಃ ಸಮಾಹಿತಃ ।**
**ದೇವತೀರ್ಥೇನ ದೇವತ್ವಾತ್ ತಿಲೈಃ ಪ್ರೇತಾಧಿಪೋ ಯತಃ ॥** –ಮೈ.ನಾ.

ದಕ್ಷಿಣಾಭಿಮುಖವಾಗಿ ಕುಳಿತುಕೊಂಡು ಉಪವೀತಿಯಾಗಿ (ಪಿತೃತರ್ಪಣಾಧಿಕಾರಿಗಳು ಎಳ್ಳು ಹಿಡಿದುಕೊಂಡು, ತರ್ಪಣಾಧಿಕಾರ ಇಲ್ಲದವರು ಬರೇ ನೀರಿನಿಂದ) ದೇವತೀರ್ಥದಿಂದ ಯಮಾದಿ ಹದಿನಾಲ್ಕು ದೇವತೆಗಳಿಗೂ ತರ್ಪಣ ಕೊಡಬೇಕು. ಆಮೇಲೆ ಬ್ರಾಹ್ಮಣರಿದ್ದರೆ ಅವರಿಗೂ ಹಿರಿಯರಿಗೂ ತೀರ್ಥನಿರ್ಮಾಲ್ಯ ಕೊಟ್ಟು ಮತ್ತೆ ತಾನೂ ತೆಗೆದುಕೊಂಡು, ಪತ್ನೀಪುತ್ರಾದಿಗಳಿಗೆಲ್ಲಾ ಕೊಡಬೇಕು.

ಮೊದಲು ಶಂಖತೀರ್ಥ ಪ್ರೋಕ್ಷಣೆ–

**ಶಂಖಮಧ್ಯಸ್ಥಿತಂ ತೋಯಂ ಭ್ರಾಮಿತಂ ಕೇಶವೋಪರಿ ।**
**ಅಂಗಲಗ್ನಂ ಮನುಷ್ಯಾಣಾಂ ಬ್ರಹ್ಮಹತ್ಯಾದಿಕಂ ದಹೇತ್ ॥**

ದೇವರಿಗೆ ಮೂರುಸುತ್ತು ಸುತ್ತಿದ ಶಂಖಮಧ್ಯದಲ್ಲಿದ್ದ ನೀರು ಶಂಖತೀರ್ಥ. ಇದನ್ನು ಮನುಷ್ಯರ ಅಂಗಾಂಗಗಳಿಗೆ ಪ್ರೋಕ್ಷಿಸಿಕೊಂಡಾಗ ಬ್ರಹ್ಮಹತ್ಯಾದಿ ಮಹಾಪಾಪಗಳು ಸುಡಲ್ಪಡುತ್ತವೆ.

**ತುಲಸೀಸಹಿತಂ ತೀರ್ಥಂ ಪಿಬೇನ್ನೋಚೇದನರ್ಥಕೃತ್ ।**
**ಜಯಾ ಚ ಮಾಯಾ ಚ ಲಕ್ಷ್ಮೀಶ್ಚ ದಲೇಷು ತ್ರಿಷು ಸಂಸ್ಥಿತಾಃ ॥** –ಸಂಗ್ರಹಃ

ಮೂರುದಳ ತುಳಸಿಯಲ್ಲಿ ಜಯಾ, ಮಾಯಾ, ಲಕ್ಷ್ಮಿಯರು ಸನ್ನಿಹಿತರಾಗಿದ್ದಾರೆ. ಆದ್ದರಿಂದ ಮೂರುದಳ ತುಳಸಿಸಹಿತವಾಗಿ ಮೂರುಸಲ ತೀರ್ಥಪ್ರಾಶನ ಮಾಡಬೇಕು.

**ಅಕಾಲಮೃತ್ಯುಮಥನಂ ಸರ್ವವ್ಯಾಧಿವಿನಾಶನಮ್ ।**
**ಸರ್ವದುರಿತೋಪಶಮನಂ ವಿಷ್ಣುಪಾದೋದಕಂ ಶುಭಮ್ ॥**

ಮಂಗಳಕರವಾದ ಈ ವಿಷ್ಣುಪಾದೋದಕ(ತೀರ್ಥ)ವು ಅಕಾಲಮೃತ್ಯುವನ್ನೂ ಸಕಲವ್ಯಾಧಿ(ರೋಗ)ಗಳನ್ನೂ ಸಮಸ್ತಪಾಪಗಳನ್ನೂ ಪರಿಹರಿಸುತ್ತದೆ.

**ಶರೀರೇ ಜರ್ಜರೀಭೂತೇ ವ್ಯಾಧಿಗ್ರಸ್ತೇ ಕಳೇಬರೇ ।**
**ಔಷಧಂ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ ॥**

ವ್ಯಾಧಿಗಳಿಂದ ಆವರಿಸಲ್ಪಟ್ಟ ಜರ್ಜರೀಭೂತವಾದ ಶರೀರಕ್ಕೆ ಗಂಗಾಜಲ(ತೀರ್ಥ)ವೇ ಔಷಧಿ. ನಾರಾಯಣನಾದ ಶ್ರೀಹರಿಯೇ ವೈದ್ಯ.

**ಶಾಲಗ್ರಾಮಶಿಲಾವಾರಿ ಪಾಪಹಾರಿ ನಿಷೇವಿತಮ್ ।**
**ಆಜನ್ಮಕೃತಪಾಪಾನಾಂ ಪ್ರಾಯಶ್ಚಿತ್ತಂ ವಿಧೀಯತೇ ॥**

ಸಮಸ್ತಪಾಪಗಳನ್ನು ಪರಿಹಾರಮಾಡತಕ್ಕ ಶಾಲಗ್ರಾಮತೀರ್ಥವನ್ನು ತೆಗೆದುಕೊಳ್ಳುವುದರಿಂದ ಹುಟ್ಟಿನಿಂದ ಮಾಡಿದ ಸಮಸ್ತ ಪಾಪಗಳಿಗೂ ಪ್ರಾಯಶ್ಚಿತ್ತವಾಗುತ್ತದೆ.

**ಪ್ರಥಮಂ ಕಾಯಶುದ್ಧ್ಯರ್ಥಂ ದ್ವಿತೀಯಂ ಧರ್ಮಸಾಧನಮ್ ।**
**ತೃತೀಯಂ ಮೋಕ್ಷದಂ ಪ್ರಾಹುಃ ಬ್ರಹ್ಮವಾಯೂ ಚ ಮಾನಿನೌ ।**
**ದೇವತಾ ತತ್ರ ಸರ್ವತ್ರ ತೀರ್ಥನಾಮಾ ಹರಿಃ ಸ್ವಯಮ್ ॥**

ಮೊದಲನೇ ಸಲದ ತೀರ್ಥಪ್ರಾಶನದಿಂದ ದೇಹಶುದ್ಧಿಯೂ, ಎರಡನೇ ಸಲದಿಂದ ಧರ್ಮಸಾಧನೆಯೂ, ಮೂರನೇ ಸಲದಿಂದ ಮೋಕ್ಷಪ್ರಾಪ್ತಿಯೂ ಆಗುವುದು. ಈ ತೀರ್ಥಕ್ಕೆ ಬ್ರಹ್ಮವಾಯುಗಳು ಅಭಿಮಾನಿದೇವತೆಗಳು ಮತ್ತು ತೀರ್ಥ ಎಂಬ ಹೆಸರಿನಿಂದ ಶ್ರೀಹರಿಯೇ ದೇವತೆ.

**ಕೃಷ್ಣರಾಮೌ ವಾಸುದೇವಂ ತೀರ್ಥಪಾನೇ ತು ಸಂಸ್ಮರೇತ್ ॥** –ಪಂ.ರಾ.ಆ.

ಕೃಷ್ಣ, ರಾಮ, ವಾಸುದೇವ ಎಂದು ಹೇಳಿ ಮೂರು ಸಲ ತೀರ್ಥ ತೆಗೆದುಕೊಳ್ಳಬೇಕು.

**ತೀಕಾರೋ ದೈತ್ಯನಾಶಾಯ ಥಕಾರಾನ್ಮೋಕ್ಷಮಾಪ್ನುಯಾತ್ ।**
**ತಸ್ಮಾತ್ತೀರ್ಥಮಿತಿ ಪ್ರೋಕ್ತಂ........ ॥** –ಸ್ಮೃ.ರ.

'ತೀರ್' ಎಂದಾಗ ದೈತ್ಯನಾಶವೂ 'ಥ' ಎಂದಾಗ ಮೋಕ್ಷಪ್ರಾಪ್ತಿಯೂ ಆಗುವುದರಿಂದ ತೀರ್ಥವೆಂದು ಹೆಸರು.

**ವಿಷ್ಣೋರಂಗಾರಶೇಷೇಣೋರ್ಧ್ವಪುಂಡ್ರಾಂತರೇ ತು ಯಃ ।**
**ಕರೋತಿ ತೀರ್ಥತೋ ಭಕ್ತ್ಯಾ ಸ ಯಾತಿ ಹರಿಮಂದಿರಮ್ ॥** –ಕೃ.ಸ್ಮೃ.

ವಿಷ್ಣುವಿನ ಅಂಗಾರಶೇಷವನ್ನು ತೀರ್ಥದಿಂದ ತೇದು ಯಾವಾತನು ಭಕ್ತಿಯಿಂದ ಲಲಾಟಮಧ್ಯದ ಊರ್ಧ್ವಪುಂಡ್ರದ ಮಧ್ಯದಲ್ಲಿ ಹಾಕಿಕೊಳ್ಳುತ್ತಾನೋ ಅವನು ಹರಿಮಂದಿರವನ್ನು ಸೇರುತ್ತಾನೆ.

**ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ ।**
**ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮ ಹಿ ॥** –ಕ.ಉ.ನಿ.

ಹೇ ಪರಮಾತ್ಮಾ, ನಿನ್ನಿಂದ ಸ್ವೀಕರಿಸಲ್ಪಟ್ಟ ಮಾಲೆ, ಗಂಧ, ವಸ್ತ್ರ, ಅಲಂಕಾರಾದಿಗಳನ್ನು ಧರಿಸಿ ನಿನಗೆ ಸಮರ್ಪಿತವಾದ ಅನ್ನಾದಿಗಳನ್ನು ಭುಂಜಿಸುವ ನಿನ್ನ ದಾಸರಾದ ನಾವು ನಿನ್ನ ಮಾಯೆಯನ್ನು ಜಯಿಸುವೆವು.

ಪ್ರತಿನಿತ್ಯ ಹೀಗೆ ವಿಷ್ಣ್ವರ್ಪಿತವಾದ ಗಂಧ, ಪುಷ್ಪ, ನಿರ್ಮಾಲ್ಯಮಾಲೆಗಳನ್ನು ಧರಿಸಿ; ಅಂಗಾರಕ ಹಾಕಿಕೊಂಡು ಅದರ ಬುಡದಲ್ಲಿ ಮಂಗಲತಿಲಕ(ಅಕ್ಷತೆ)ಯನ್ನು ಹಾಕಿಕೊಳ್ಳಬೇಕು. ಈ ಮಂಗಲತಿಲಕ(ಅಕ್ಷತ)ವನ್ನು ಏಕಾದಶಿ ದಿವಸವೂ ಮೃತಾಶೌಚದಲ್ಲಿಯೂ ಧರಿಸಬಾರದು.

**ಪಾವನಂ ವಿಷ್ಣುನೈವೇದ್ಯಂ ಸಂಭೋಜ್ಯಮೃಷಿಭಿಃ ಸ್ಮೃತಮ್ ।**
**ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥** –ಕೃ.ಮ.

ವಿಷ್ಣ್ವರ್ಪಿತವಾದ ನೈವೇದ್ಯ ಪಾವನವಾದದ್ದು, ಭೋಜ್ಯವಾದದ್ದು ಎಂದು ತತ್ವಜ್ಞಾನಿಗಳ ಮತ. ಇತರ ದೇವತೆಗಳ ನೈವೇದ್ಯ ಭುಂಜಿಸಿದರೆ ಪ್ರಾಯಶ್ಚಿತ್ತರೂಪವಾಗಿ ಚಾಂದ್ರಾಯಣವ್ರತವನ್ನು ಆಚರಿಸಬೇಕು.

**ಭುಕ್ತಶೇಷಂ ಭಗವತೋ ಭೃತ್ಯಾತಿಥಿಪುರಸ್ಸರಃ ।**
**ಭುಂಜೀತ ಹೃದ್ಗತಂ ವಿಷ್ಣುಂ ಸ್ಮರಸ್ತದ್ಗತಮಾನಸಃ ॥**
**ಆಚಮ್ಯ ಮೂಲಮಂತ್ರೇಣ ಕೋಷ್ಠಂ ಸ್ವಮಭಿಮಂತ್ರಯೇತ್ ॥** –ಸ.ಸ್ಮೃ.

ಭಗವಂತನಿಗೆ ಸಮರ್ಪಿಸಿದ ಪ್ರಸಾದವನ್ನು ಹರಿಸೇವಕರಾದ ಅತಿಥಿಗಳೂ, ತನ್ನಿಂದ ಪೋಷಿಸಲರ್ಹರಾದ ವೃದ್ಧರಾದ ಮಾತಾಪಿತೃಗಳೂ, ಬಾಲಾದಿಗಳೂ ಇವರಿಂದ ಕೂಡಿದವನಾಗಿ ತನ್ನ ಹೃದಯದಲ್ಲಿರುವ ಪರಮಾತ್ಮನನ್ನು ಸ್ಮರಿಸುತ್ತಾ ಆ ಹರಿಯಲ್ಲೇ ಮನಸ್ಸನ್ನಿಡುತ್ತಾ 'ಗೋವಿಂದಂ ಭೋಜನಕಾಲೇ' ಮಧ್ಯೇ ಮಧ್ಯೇ ಗೋವಿಂದಸ್ಮರಣೆ ಮಾಡುತ್ತಾ ಭೋಜನ ಮಾಡಬೇಕು. ಊಟವಾದ ಮೇಲೆ ಆಚಮನ ಮಾಡಿ ಹೊಟ್ಟೆಯ ಮೇಲೆ ಕೈಯಿಟ್ಟು ಭಗವಂತನನ್ನು ಸ್ಮರಿಸಬೇಕು.

**ಅನ್ನೇನ ಪೂರಯೇದರ್ಧಂ ಪಾದಂ ತೋಯೇನ ಪೂರಯೇತ್ ।**
**ವಾಯೋಃ ಸಂಚರಣಾರ್ಥಂ ತು ಚತುರ್ಥಮವಶೇಷಯೇತ್ ॥** –ಸಂಗ್ರಹ.

ಹೊಟ್ಟೆಯನ್ನು ಅನ್ನದಿಂದ ಅರ್ಧಭಾಗ, ನೀರಿನಿಂದ ಕಾಲುಭಾಗ ಪೂರೈಸಿ ವಾಯುಸಂಚಾರಕ್ಕಾಗಿ ಕಾಲುಭಾಗ ಬಿಡಬೇಕು.

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥** –ಭ.ಗೀ.

**ಕೇವಲಾಘೋ ಭವತಿ ಕೇವಲಾದೀ ।** –ಅನ್ನಸೂಕ್ತ

ದೇವರಪೂಜೆಯೂ ಯಜ್ಞ, ಅಲ್ಲಿ ಸಮರ್ಪಿಸಿ, ವೈಶ್ವದೇವ ಮಾಡಿ, ಅತಿಥಿ ಸತ್ಕಾರ–ಬ್ರಾಹ್ಮಣಭೋಜನ ಎಂದರೆ ಪ್ರಾಣಾಗ್ನಿಹೋತ್ರಯಜ್ಞ, ಇದನ್ನೆಲ್ಲ ಮಾಡಿದ ಅನಂತರ ಇದರಲ್ಲಿ ಉಳಿದಭಾಗ 'ಯಜ್ಞಶಿಷ್ಟ'. ಇದನ್ನು ಭೋಜನ ಮಾಡಿದವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಇದನ್ನೆಲ್ಲ ಮಾಡದೆ ಕೇವಲ ತನ್ನ ಊಟಕ್ಕಾಗಿ ಎಲ್ಲವನ್ನು ತಯಾರಿಸಿ ಭುಂಜಿಸಿದವನು ಪಾಪವನ್ನೇ ಉಣ್ಣುವವನಾಗುತ್ತಾನೆ. ಆಮೇಲೆ ಉತ್ತರಾಪೋಶನ ತೆಗೆದುಕೊಂಡು ಕೈಕಾಲು ತೊಳೆದು ಹನ್ನೆರಡುಸಲ ಬಾಯಿಮುಕ್ಕಳಿಸಿ, ಆಸನದಲ್ಲಿ ಕುಳಿತುಕೊಂಡು ನಾಲ್ಕು ಸಲ ಆಚಮನ ಮಾಡಿ,

**ಶರ್ಯಾತಿಂ ಚ ಸುಕನ್ಯಾಂ ಚ್ಯವನಂ ಚೇಂದ್ರಮಶ್ವಿನೌ ।**
**ಭೋಜನಾಂತೇ ಸ್ಮರನ್ನಕ್ಷ್ಣೋರಂಗುಷ್ಠಾಗ್ರ್ಯಾಂಬು ನಿಕ್ಷಿಪೇತ್ ॥** –ಭಾಗ.

ಶರ್ಯಾತಿರಾಜ, ಅವನ ಮಗಳು ಸುಕನ್ಯಾ, ಚ್ಯವನಋಷಿ, ಇಂದ್ರ ಮತ್ತು ಅಶ್ವಿನೀದೇವತೆಗಳನ್ನು ಸ್ಮರಿಸುತ್ತಾ ಎರಡು ಕೈಯ ಅಂಗುಷ್ಠದ ತುದಿಯಿಂದ ಎರಡು ಕಣ್ಣುಗಳಿಗೆ ನೀರನ್ನು ಮುಟ್ಟಿಸಬೇಕು. ಹೀಗೆ ಪ್ರತಿನಿತ್ಯ ಭೋಜನಾನಂತರ ಮಾಡಿದರೆ ಕಣ್ಣುನೋವು ಬರುವುದಿಲ್ಲ. ಅದೂ ಅಲ್ಲದೆ,

**ದುರನ್ನಮಪಿ ಯದ್ಭುಕ್ತಂ ಪತಿತಾನ್ನಂ ಚ ದೂಷಿತಮ್ ।**
**ತತ್ಸರ್ವಂ ನಾಶಮಾಪ್ನೋತಿ ಚಕ್ಷುನಿಕ್ಷಿಪ್ತವಾರಿಣಾ ॥**

–ಸಂಗ್ರಹ

ಭೋಜನಾನಂತರ ಎರಡು ಕೈಗಳ ಹೆಬ್ಬೆರಳಿನ ತುದಿಯ ನೀರನ್ನು ಎರಡು ಕಣ್ಣುಗಳಿಗೂ ಮುಟ್ಟಿಸಿದಾಗ ದುಷ್ಟಾನ್ನದೂಷಿತವಾದ ಪತಿತಾನ್ನಗಳನ್ನು ಭೋಜನ ಮಾಡಿದ ಪಾಪಗಳೆಲ್ಲವೂ ನಾಶವಾಗುತ್ತವೆ. ಆಮೇಲೆ,

**ಇದಮನ್ನಂ ಪವಿತ್ರಂ ಸ್ಯಾತ್ಪಾನೀಯಂ ಚಾತಿಪಾವನಮ್ ।**
**ಭುಕ್ತಪೀತವಿಶುದ್ಧ್ಯರ್ಥಂ ಪಿಬೇತ್ಪಾದೋದಕಂ ಹರೇಃ ॥**

ಉಂಡ ಅನ್ನವು, ಕುಡಿದ ನೀರು ಅತಿಪವಿತ್ರವಾಗುವುದಕ್ಕೋಸ್ಕರ ಭೋಜನಾನಂತರ ಶ್ರೀಹರಿಯ ಪಾದೋದಕ (ತೀರ್ಥ)ವನ್ನು ಪ್ರಾಶನ ಮಾಡಬೇಕು.

**ಭೋಜನಾನಂತರೇ ವಿಷ್ಣೋರರ್ಪಿತಂ ತುಳಸೀದಳಮ್ ।**
**ಭಕ್ಷಣಾತ್ಫಲಮಾಪ್ನೋತಿ ಚಾಂದ್ರಾಯಣಶತಾಧಿಕಮ್ ॥**

'ಭೋಜನಾಂತೇ ದಳತ್ರಯಂ' ಎಂಬಂತೆ ಭೋಜನಾನಂತರ ಶ್ರೀಹರಿಸಮರ್ಪಿತವಾದ ಮೂರು ತುಳಸೀದಳ ಸ್ವೀಕಾರದಿಂದ ನೂರಾರು ಚಾಂದ್ರಾಯಣವ್ರತದ ಫಲ ಬರುವುದು.

ಆಮೇಲೆ ಮೂಲಮಂತ್ರ ಪಠಿಸುತ್ತ ತನ್ನ ಹೊಟ್ಟೆಯನ್ನು ಬಲಗೈಯಿಂದ ಮುಟ್ಟಿ ಅಭಿಮಂತ್ರಿಸಬೇಕು.

**ಪ್ರಾಣಾಪಾನಸಮಾನಾನಾಮುದಾನವ್ಯಾನಯೋಸ್ತಥಾ ।**
**ಅನ್ನಂ ತುಷ್ಟಿಕರಂ ಚಾಸ್ತು ಮಮಾಸ್ತ್ವವ್ಯಾಹತಂ ಸುಖಮ್ ॥**

**ಅಗಸ್ತಿರಗ್ನಿರ್ವಡವಾನಲಶ್ಚ ಭುಕ್ತಂ ಮಮಾನ್ನಂ ಜರಯತ್ವಶೇಷಮ್ ।**
**ಸುಖಂ ಚ ಮೇ ತತ್ಪರಿಣಾಮಸಂಭವಂ ಪಚತ್ವರೋಗಂ ಮಮ ಚೈವ ದೇಹೇ ॥**

ಎಂದು ತನ್ನ ಬಲಕೈಯಿಂದ ಹೊಟ್ಟೆಯನ್ನು ಮುಟ್ಟಿ ನೀರನ್ನು ದೇಹಕ್ಕೆ ಪ್ರೋಕ್ಷಿಸಿಕೊಂಡು, ರಾಮಸ್ಮರಣೆ ಮಾಡುತ್ತಾ 'ಭುಂಕ್ತ್ವಾ ಶತಪಥಂ ಗಚ್ಛೇತ್' ನೂರು ಹಜ್ಜೆ ಸಂಚರಿಸುತ್ತ ಕೈಯಿಂದ ಹೊಟ್ಟೆಯನ್ನು ಮುಟ್ಟಿ,

**ಅಶೇಷಂ ಜರಯತ್ವನ್ನಂ ಮಯಾ ಭುಕ್ತಂ ಶಿವಾತ್ಮಕಮ್ ।**
**ಜಠರಾಗ್ನಿರ್ಜಗತ್ಪ್ರಾಣೋ ವಿಶ್ವಸ್ಯಾತ್ಮಾ ಗುಹಾಶ್ರಯಃ ॥**

ಎಂದು ಮಂತ್ರಿಸಿ ಕುಳಿತುಕೊಂಡು ಶ್ರೋತ್ರಾಚಮನಮಾಡಿ, ಹರಿಸಮರ್ಪಿತ ತಾಂಬೂಲವನ್ನು ಬ್ರಾಹ್ಮಣ, ಮುತ್ತೈದೆಯರಿಗೆ ಕೊಟ್ಟು, ದಕ್ಷಿಣೆಯನ್ನು ಕೊಟ್ಟು (ಗೃಹಸ್ಥಾಶ್ರಮಿಯು) ತಾನೂ ತಾಂಬೂಲಚರ್ವಣ ಮಾಡಬೇಕು. ಈ ತಾಂಬೂಲ ಚರ್ವಣವನ್ನು ಗೃಹಸ್ಥಾಶ್ರಮಿಯು ಪರ್ವದಿನಗಳಲ್ಲಿ, ದಿನತ್ರಯದಲ್ಲಿ, ಮಾತಾಪಿತೃಗಳ ಶ್ರಾದ್ಧದಿನಗಳಲ್ಲಿಯೂ ಮಾಡಬಾರದು. ಬ್ರಹ್ಮಚಾರಿಗೆ ಇದು ನಿಷಿದ್ಧ.

**ವೇದಶಾಸ್ತ್ರವಿನೋದೇನ ಪ್ರೀಣಯನ್ ಪುರುಷೋತ್ತಮಮ್ ।**
**ಅಹಃಶೇಷಂ ನಯೇತ್ ಸಂಧ್ಯಾಮುಪಾಸೀತಾಥ ಪೂರ್ವವತ್ ॥**

–ಸ.ಸ್ಮೃ.

ಆಮೇಲೆ ವೇದ, ವೇದಾಂತಶಾಸ್ತ್ರ ಓದುವುದು, ಹಾಗೆಯೇ ಪುರಾಣಾದಿಗಳನ್ನು ಬಲ್ಲಿದರಿಂದ ಕೇಳಿ

ತಿಳಿದುಕೊಳ್ಳುವುದರಿಂದ ಜ್ಞಾನಸಂಪಾದನೆ ಮಾಡುವುದು. ಸೂರ್ಯಾಸ್ತಮಯಕ್ಕೆ ಮೂರು ಘಳಿಗೆ ಇರುವಾಗ ಸಾಯಂಸಂಧ್ಯಾವಂದನೆ ಮಾಡಿ, ದೇವರಿಗೂ ತುಳಸಿಗೂ ದೀಪ ಇಟ್ಟು, ನಮಸ್ಕರಿಸಿ, ಮನೆಯಲ್ಲಿರುವವರೆಲ್ಲರನ್ನೂ ದೇವರೆದುರು ಕೂಡಿಸಿಕೊಂಡು ಹರಿನಾಮಸಂಕೀರ್ತನೆ, ಭಜನೆ ಮಾಡಿ, ವಿಷ್ಣುಸಹಸ್ರನಾಮವೇ ಮೊದಲಾದ ಸ್ತೋತ್ರಗಳನ್ನು ಹೇಳಿ ಶ್ರೀದೇವರಿಗೆ ರಾತ್ರಿಪೂಜೆ ಮಾಡಿ, ಎಲ್ಲರೂ ತೀರ್ಥ ತೆಗೆದುಕೊಂಡು ಭೋಜನ ಮಾಡಬೇಕು. ಗೃಹಸ್ಥಾಶ್ರಮಿಯು ದಶಮಿ, ದ್ವಾದಶಿ, ಅಮಾವಾಸ್ಯೆ, ಸಂಕ್ರಾಂತಿ, ಪಿತೃಪಕ್ಷ ಪೂರ್ತಿ, ಶ್ರಾದ್ಧದ ಪೂರ್ವದಿನ ಮತ್ತು ಶ್ರಾದ್ಧದ ದಿನ ಬಿಟ್ಟು ಬಾಕಿ ದಿವಸಗಳಲ್ಲಿ ರಾತ್ರಿಭೋಜನ ಮಾಡಬಹುದು. ರಾತ್ರಿಯೂ ಭೋಜನದ ಅನಂತರ ಕೈಕಾಲು ತೊಳೆದು ಹನ್ನೆರಡು ಸಲ ಬಾಯಿಮುಕ್ಕಳಿಸಿ, ಆಸನದಲ್ಲಿ ಕುಳಿತುಕೊಂಡು ನಾಲ್ಕು ಸಲ ಆಚಮನ ಮಾಡಿ, ದೇವರ ತೀರ್ಥ ಒಂದು ಸಲ ತೆಗೆದುಕೊಂಡು ಹರಿಸ್ಮರಣೆ ಮಾಡಬೇಕು. ಆಮೇಲೆ,

**ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಮ್ ।**
**ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್ ॥** –ಸ.ಸ್ಮೃ.

ತನಗೆ ಇಷ್ಟವಾದ ದೇವರ ಪೂಜಾದಿಕರ್ಮವು, ಅಗ್ನಿಯಲ್ಲಿ ವೈಶ್ವದೇವದ ಮೂಲಕ ದೇವತೆಗಳಿಗೆ ಹವಿಸ್ಸು ಕೊಡುವುದೇ ಮೊದಲಾದ ದಾನವು, ಬ್ರಾಹ್ಮಣರಿಗೆ ಕೊಟ್ಟ ದಾನವು, ಔಪಾಸನಹೋಮವು, ಗಾಯತ್ರಿಯೇ ಮೊದಲಾದ ಮಂತ್ರಗಳ ಜಪವು, ಬಾವಿ–ಕೆರೆ–ಛತ್ರ–ದೇವಾಲಯ ಕಟ್ಟಿಸುವುದು ಮೊದಲಾದ ಪರೋಪಕಾರ ಕರ್ಮ, ತನಗೆ ಸುಖಕರವಾದ ಅನ್ನಪಾನಾದಿ ಭೋಗ ಇವುಗಳನ್ನೂ, ಹೆಂಡತಿ–ಮಕ್ಕಳು–ಸ್ನೇಹಿತರನ್ನೂ, ತನ್ನ ಪ್ರಾಣವನ್ನೂ ಕೂಡಾ ಸರ್ವರಿಗೂ ಉತ್ತಮನಾದ ಶ್ರೀನಾರಾಯಣನಿಗೆ ಭಕ್ತಿಯಿಂದ ಸಮರ್ಪಿಸಬೇಕು.

**ಪ್ರಾತಃಪ್ರಭೃತಿಸಾಯಾಂತಂ ಸಾಯಾದಿಪ್ರಾತರಂ ತಥಾ ।**
**ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಮ್ ॥**

ಬೆಳಗ್ಗೆಯಿಂದ ರಾತ್ರಿಯವರೆಗೂ, ರಾತ್ರಿಯಿಂದ ಬೆಳಗಿನವರೆಗೂ ನಾನು ಏನೇನು ಮಾಡುತ್ತೇನೋ ಅದೆಲ್ಲವೂ ನಿನ್ನ ಪೂಜೆಯಾಗಲಿ ಎಂದು ನೆನೆಸಬೇಕು.

**ಕಾಯೇನ ವಾಚಾ ಮನಸೇಂದ್ರಿಯೈರ್ವಾಬುದ್ಧ್ಯಾಽಽತ್ಮನಾ ವಾಽನುಸೃತಃ ಸ್ವಭಾವಮ್ ।**
**ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥** –ಸ.ಸ್ಮೃ.

ಪ್ರಾತಃಕಾಲ ಮೊದಲ್ಗೊಂಡು ಶಯನಪರ್ಯಂತ ದೇಹದಿಂದ ಮಾಡಿದ ಕರ್ಮವನ್ನು, ಕಣ್ಣು ಮೊದಲಾದ ಇಂದ್ರಿಯಗಳಿಂದ ದರ್ಶನ–ಶ್ರವಣಾದಿ ಕರ್ಮವನ್ನು, ಬುದ್ಧಿಯಿಂದ ಮಾಡಿದ ಕಾರ್ಯಾಕಾರ್ಯ ವಿಚಾರವನ್ನೂ ನನ್ನ ಜೀವನಸ್ವಭಾವವನ್ನನುಸರಿಸುವವನಾಗಿ, ಯಾವ ಯಾವ ಕರ್ಮವನ್ನು ಮಾಡುವೆನೋ ಅದೆಲ್ಲವನ್ನೂ ಸರ್ವೋತ್ತಮನಾದ ಶ್ರೀಮನ್ನಾರಾಯಣನಿಗೋಸ್ಕರ ಸಮರ್ಪಿಸುವೆನು ಎಂದು ಶ್ರೀಹರಿಗೆ ಸರ್ವಸಮರ್ಪಣೆ ಮಾಡಬೇಕು.

**ಯಾಮಮಾತ್ರರತ ಏವಾಥ ಸ್ವಪೇದ್ ಧ್ಯಾಯನ್ ಜನಾರ್ದನಮ್ ।**
**ಅಂತರಾಲೇ ತತೋ ಬುದ್ಧ್ವಾ ಸ್ಮರೇತ ಬಹುಶೋ ಹರಿಮ್ ॥** –ಸ.ಸ್ಮೃ.

ಮೊದಲನೆಯ ಯಾಮ ಕಳೆದನಂತರ (ಅಸ್ತಮಯದ ಮೇಲೆ ೩ ಘಂಟೆಯ ಅನಂತರ) ದುಷ್ಟಸಂಹಾರಕನಾದ ಪರಮಾತ್ಮನನ್ನು ಧ್ಯಾನಿಸುತ್ತಾ ಮಲಗಬೇಕು. ಮಧ್ಯೇ ಮಧ್ಯೇ ಎಚ್ಚರವಾದಾಗ ಹರಿಸ್ಮರಣೆ ಮಾಡಬೇಕು. 'ಶಯನೇ ಪದ್ಮನಾಭಂ ಚ' ಮಲಗುವಾಗ 'ಪದ್ಮನಾಭಾಯ ನಮಃ' ಎಂದೂ, ದುಃಸ್ವಪ್ನ ಆದರೆ 'ದುಃಸ್ವಪ್ನೇ ಸ್ಮರ ಗೋವಿಂದಂ' ಗೋವಿಂದಸ್ಮರಣೆಯನ್ನೂ ಮಾಡಬೇಕು.

**ಅಗಸ್ತ್ಯೋ ಮಾಧವಶ್ಚೈವ ಮುಚುಕುಂದೋ ಮಹಾಬಲಃ ।**
**ಕಪಿಲೋ ಮುನಿರಾಸ್ತೀಕಃ ಪಂಚೈತೇ ಸುಖಶಾಯಿನಃ ॥**

**ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವತಶ್ಚ ಮಹಾಬಲೌ ।**
**ಆಕರ್ಣಪೂರ್ಣಧನ್ವಾನೌ ರಕ್ಷೇತಾಂ ರಾಮಲಕ್ಷ್ಮಣೌ ॥**

**ಜಲೇ ರಕ್ಷತು ವಾರಾಹಃ ಸ್ಥಲೇ ರಕ್ಷತು ವಾಮನಃ ।**
**ಅಟವ್ಯಾಂ ನಾರಸಿಂಹಶ್ಚ ಶಯನೇ ಪಾತು ಮಾಧವಃ ॥** –ಸಂಗ್ರಹ

ಈ ಮಂತ್ರಗಳನ್ನು ಹೇಳಿ ತನ್ನ ಕಂಠದಲ್ಲಿರುವ ಉದಾನವಾಯ್ವಂತರ್ಗತ ಪ್ರಾಜ್ಞರೂಪಿ ಪರಮಾತ್ಮನನ್ನು ನೆನೆಯುತ್ತಾ ಮಲಗಬೇಕು. ಇದರಿಂದ ಸುಖನಿದ್ರೆ ಬರುತ್ತದೆ.

**ಸ್ವಗೃಹೇ ಪ್ರಾಕ್‌ಶಿರಾಃ ಶೇತೇ ಶ್ವಾಶುರ್ಯೇ ದಕ್ಷಿಣಾ ಶಿರಾಃ ।**
**ಪ್ರತ್ಯಕ್‌ಶಿರಾಃ ಪ್ರವಾಸೇ ಚ ನ ಕದಾಚಿದುದಕ್ ಶಿರಾಃ ॥** –ಸಂಗ್ರಹ

ತನ್ನ ಮನೆಯಲ್ಲಿ ಪೂರ್ವಕ್ಕೆ ತಲೆಯಾಗಿಯೂ, ಅತ್ತೆಮನೆಯಲ್ಲಿ ದಕ್ಷಿಣಕ್ಕೆ ತಲೆಯಾಗಿಯೂ, ಪ್ರಯಾಣದಲ್ಲಿ ಪಶ್ಚಿಮಕ್ಕೆ ತಲೆಯಾಗಿಯೂ ಮಲಗಬೇಕು. ಯಾವಾಗಲೂ ಎಲ್ಲಿಯೂ ಉತ್ತರಕ್ಕೆ ತಲೆ ಹಾಕಿ ಮಲಗಲೇಬಾರದು. ಗೃಹಸ್ಥಾಶ್ರಮಿಯು ಅಮಾವಾಸ್ಯೆ, ಪೌರ್ಣಮಿ, ಸಂಕ್ರಾಂತಿ, ದಶಮ್ಯಾದಿತ್ರಯ, ಶ್ರಾದ್ಧದ ಪೂರ್ವದಿನ ಮತ್ತು ಶ್ರಾದ್ಧದ ದಿನ, ಪಿತೃಪಕ್ಷ ಪೂರ್ತಿ, ಜನ್ಮನಕ್ಷತ್ರದ ದಿನ ಮತ್ತು ಹಗಲು –ಇಷ್ಟು ಸಮಯ ಬಿಟ್ಟು ಪತ್ನಿಯ ಋತುಕಾಲದಲ್ಲಿ (ಮುಟ್ಟಾಗಿ ೫ನೇ ದಿನದಿಂದ ೧೬ನೇ ದಿನದವರೆಗೆ ಈ ಸಮಯಗಳಲ್ಲಿ) ಸ್ತ್ರೀಸಂಗ ಮಾಡುವುದು ಶಾಸ್ತ್ರವಿಹಿತ.

**ನಾಮಾವಸ್ಯಾಯಾಂ ಪೌರ್ಣಮಾಸ್ಯಾಂ ಚ ಸ್ತ್ರೀಯಮುಪೇಯಾತ್ ।**
**ಯದುಪೇಯಾನ್ನಿರಿಂದ್ರಿಯಃ ಸ್ಯಾತ್ ॥** –ಶ್ರುತಿ

ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ಸ್ತ್ರೀಸಂಗ ಮಾಡಿದರೆ ಕ್ರಮೇಣ ನಪುಂಸಕನಾಗುತ್ತಾನೆ.

ಇದಕ್ಕೆ 'ವಾಮದೇವಯಜ್ಞ' ಎಂದು ಹೆಸರು. ಇದನ್ನು ಮಾಡುವಾಗ ಉಪವೀತವನ್ನು ಮಾಲಾಕಾರ ಮಾಡಿಕೊಂಡು,'ಸಂಯೋಗೇ ಶ್ರೀಧರಂ ತಥಾ– ಶ್ರೀಧರಾಯ ನಮಃ' ಎಂದು ಹೇಳಬೇಕು. ಅನಂತರ ಕೈಕಾಲು ತೊಳೆದುಕೊಂಡು ಹದಿನಾರುಸಲ ಬಾಯಿ ಮುಕ್ಕಳಿಸಿ, ಕುಳಿತುಕೊಂಡು ಐದುಸಲ ಆಚಮನ ಮಾಡಬೇಕು. ಅಥವಾ 'ಪುಂಡರೀಕಾಕ್ಷಾಯ ನಮಃ' ಎಂದು ಹೇಳಿ ಶ್ರೋತ್ರಾಚಮನ ಮಾಡಬೇಕು.

ಶ್ರೀಮದಾನಂದತೀರ್ಥಭಗವತ್ಪಾದರು ಸದಾಚಾರಸ್ಮೃತಿಯಲ್ಲಿ ಹೇಳಿರುವ ವಿಷಯಗಳಿಗೆ ಸಂವಾದಿಯಾದ ಧರ್ಮಶಾಸ್ತ್ರಗಳನ್ನು ಅಳವಡಿಸಿಕೊಂಡು, ಪ್ರಾತಃಕಾಲದಿಂದ ರಾತ್ರಿಯವರೆಗೆ ಮಾಡತಕ್ಕ, ಇಲ್ಲಿಯವರೆಗೆ ಹೇಳಿರುವ ನಿತ್ಯಾನುಷ್ಠಾನವನ್ನು ಶ್ರದ್ಧೆಯಿಂದ ಹರಿಸ್ಮರಣೆ ಮಾಡುತ್ತಾ ನಾನು ಮಾಡುವ ಎಲ್ಲಾ ಕರ್ಮಗಳಿಂದಲೂ ಶ್ರೀಹರಿವಾಯುಗಳು ಸುಪ್ರೀತರಾಗಲಿ ಎಂದು ಅನುಸಂಧಾನ ಪೂರ್ವಕ ಪರಮಾತ್ಮನಿಗೆ ಅರ್ಪಣೆ ಮಾಡುವುದರಿಂದ ಇಡೀ ಜೀವನವು ಯಜ್ಞಮಯವಾಗುತ್ತದೆ.

## ಪೌರೋಹಿತ್ಯ ಕಲಿಯುವವರು ತಿಳಿಯಬೇಕಾದ ವಿಷಯ

ಪುರೋಹಿತರಾಗಲಿಚ್ಛಿಸುವವರು ಉಪನಯನದ ಅನಂತರ ಸಂಧ್ಯಾ ವಂದನೆಯ, ಅಗ್ನಿಕಾರ್ಯದ ಮಂತ್ರಗಳನ್ನು ಮೊದಲು ಚೆನ್ನಾಗಿ ಕಲಿತು ಸಕಾಲದಲ್ಲಿ ಶೌಚಾಚಾರ ಸ್ನಾನದ ಅನಂತರ ಅದನ್ನು ಮಾಡುತ್ತಾ

ಒಂದು; ಪುರುಷಸೂಕ್ತ, ವಿಷ್ಣುಸೂಕ್ತ, ಶ್ರೀಸೂಕ್ತಾದಿಗಳನ್ನು, ಶ್ರೀವಿಷ್ಣುಸಹಸ್ರನಾಮಸ್ತೋತ್ರ, ಶ್ರೀಕೃಷ್ಣಾಷ್ಟೋತ್ತರಶತ ನಾಮಸ್ತೋತ್ರ ಶ್ರೀವೇಂಕಟೇಶಸ್ತೋತ್ರಗಳನ್ನು, ಸದಾಚಾರಸ್ಮೃತಿ, ಶ್ರೀಹರಿವಾಯುಸ್ತುತಿ, ಭಗವದ್ಗೀತೆಯ ೧೫ನೆಯ ಅಧ್ಯಾಯ, ಅಣುಭಾಷ್ಯ, ತಾರತಮ್ಯಸ್ತೋತ್ರ, ದ್ವಾದಶ ಸ್ತೋತ್ರಗಳನ್ನೂ ಕಲಿತು ಇದನ್ನೆಲ್ಲಾ ಪ್ರತಿನಿತ್ಯ ಪಾರಾಯಣ ಮಾಡುತ್ತಿರಬೇಕು. ಆಮೇಲೆ,

**ಗುರುಃ ಸತ್ಸಂಪ್ರದಾಯಜ್ಞಃ ತಾರತಮ್ಯೇನ ಸಿದ್ಧಿದಃ ।** –ತಂ.ಸಾ.ಸಂ

**ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ ।** –ತಾ.ನಿ.

ಸತ್ಸಂಪ್ರದಾಯಗಳನ್ನು ತಿಳಿದಿರುವ, ತಾರತಮ್ಯಜ್ಞಾನಗಳುಳ್ಳವರೂ ಪೌರೋಹಿತ್ಯಕ್ಕೆ ಬೇಕಾಗುವ ಪೂರ್ವಾಪರ-ಷೋಡಶಕರ್ಮಗಳ ಎಲ್ಲಾ ಪ್ರಯೋಗಗಳನ್ನೂ, ಅದಕ್ಕೆ ಬೇಕಾಗುವ ಜ್ಯೌತಿಷ, ಧರ್ಮಶಾಸ್ತ್ರಗಳನ್ನೂ, ತಂತ್ರಸಾರ-ಸಂಗ್ರಹ, ಯೋಗದೀಪಿಕಾ ಗ್ರಂಥಗಳನ್ನೂ ತಿಳಿದಿರುವ, ಒಳ್ಳೆಯ ಆಚಾರವಂತರಾದ ಪುರೋಹಿತರನ್ನು ಅರಿಸಿ, ಎಲ್ಲವನ್ನೂ ತಿಳಿದು, ಶಿಷ್ಯನ ಸಂಶಯವನ್ನು ಶಾಸ್ತ್ರೋಕ್ತ ವಾಗಿ ಪರಿಹರಿಸಲು ಸಮರ್ಥರಾದ ಗುರುಗಳಲ್ಲಿ ಪೌರೋಹಿತ್ಯಾಭ್ಯಾಸ ಮಾಡಬೇಕು.

ಮೊದಲು, ಪವಮಾನಸೂಕ್ತ, ಅಭಿಷೇಕಸೂಕ್ತ, ಪಂಚೋಪನಿಷತ್, ಉದಕ ಶಾಂತಿ ಮಂತ್ರಗಳನ್ನು ಪಾಠ ಕೇಳಿ ಆಮೇಲೆ ಶಾಂತಿಪಾಠಪೂರ್ವಕ ವೇದಾಧ್ಯಯನ ಮಾಡಬೇಕು. ಋಗ್ವೇದ, ಯಜುರ್ವೇದ ಈ ಎರಡು ವೇದಾಧ್ಯಯನ ಮಾಡಿದರೆ ಎರಡು ಶಾಖೆಯ ಪೌರೋಹಿತ್ಯ ಕಲಿಯಲು ಅನುಕೂಲವಾಗುತ್ತದೆ. ವೇದಕ್ಕೆ ಶಿಕ್ಷಾ, ವ್ಯಾಕರಣಂ, ನಿರುಕ್ತಂ, ಛಂದಃ, ಜ್ಯೌತಿಷ, ಕಲ್ಪಸೂತ್ರಗಳು ಎಂದು ಷಡಂಗಗಳು.

**ಛಂದಃ ಪಾದೌ ತು ವೇದಸ್ಯ ಹಸ್ತಃ ಕಲ್ಪೋಽಥ ಉಚ್ಯತೇ ।**
**ಜ್ಯೋತಿಷಾಮಯನಂ ಚಕ್ಷುರ್ನಿರುಕ್ತಂ ಶ್ರೋತ್ರ ಉಚ್ಯತೇ ॥**

**ಶಿಕ್ಷಾ ಘ್ರಾಣಂ ಚ ವೇದಸ್ಯ ಮುಖಂ ವ್ಯಾಕರಣಂ ಸ್ಮೃತಮ್ ।**
**ತಸ್ಮಾತ್ಸಾಂಗಮಧೀತ್ಯೈವ ಬ್ರಹ್ಮಲೋಕೇ ಮಹೀಯತೇ ॥** –ಪಾಣಿನಿಶಿಕ್ಷಾ

ಷಡಂಗಸಹಿತವಾದ ವೇದಾಧ್ಯಯನ ಮಾಡಿದರೆ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ.

ಯಾವ ಮಂತ್ರವೂ ಫಲಿಸಬೇಕಾದರೆ ಗುರುಮುಖದಿಂದ ಉಪದೇಶ ಪಡೆಯಬೇಕು. ಆದರೆ ಮಾತ್ರ ಮಂತ್ರ ಹೇಳುವ ಅಧಿಕಾರವು ಮತ್ತು ಫಲಿತಾಂಶವು ದೊರಕುವುದು. ಪೌರೋಹಿತ್ಯ ಮಾಡುವಾಗ ಎಲ್ಲಾ ಕರ್ಮಗಳಲ್ಲಿಯೂ ಹೇಳುವ ಮಂತ್ರಗಳು ವೇದಮಂತ್ರಗಳೇ ಆದುದರಿಂದ ಮೊದಲು ಈ ವೇದವನ್ನು ಗುರುಮುಖದಿಂದ ಉಪದೇಶಪಡೆದು ಅಧ್ಯಯನ ಮಾಡಬೇಕು. ಹೀಗೆ ಮಾಡಿದರೆ ಮಾತ್ರ ಪೌರೋಹಿತ್ಯ ಮಾಡಿದವನಿಗೂ, ಮಾಡಿಸಿದವನಿಗೂ ಸತ್ಫಲ ಸಿಗುತ್ತದೆ. ಮಂತ್ರೋಪ ದೇಶ ಇಲ್ಲದೇ ಮಾಡಿದರೆ ಕರ್ಮದಿಂದ ಇಬ್ಬರಿಗೂ ದುಷ್ಫಲ. ವೇದ ಕಲಿತರೆ ಮಾತ್ರ ಸಾಲದು. ಸಾಧ್ಯವಿದ್ದಷ್ಟು ವೇದಾಂತಗಳನ್ನು, ವೇದಾಂಗಗಳನ್ನು ತಿಳಿದು ಅದನ್ನು ಯಾವಾಗಲೂ ಸ್ವಲ್ಪಸ್ವಲ್ಪವಾದರೂ ಪಾರಾಯಣ ಮಾಡುತ್ತಿದ್ದರೆ ಮಂತ್ರಗಳಿಗೂ ಸಾಮರ್ಥ್ಯ ಬರುತ್ತದೆ.

**ವೇದಾನಧೀತ್ಯ ವೇದೌ ವಾ ವೇದಂ ವಾಪಿ ಯಥಾಕ್ರಮಮ್ ।**
**ಅವಿಲುಪ್ತಬ್ರಹ್ಮಚರ್ಯಾತ್ ಗೃಹಸ್ಥಾಶ್ರಮಮಾವಸೇತ್ ॥** –ಮ.ಸ್ಮೃ.

ಬ್ರಹ್ಮಚಾರಿಯಾದವನು ತನ್ನ ಅಖಂಡಬ್ರಹ್ಮಚರ್ಯವನ್ನು ಧರಿಸಿ, ಮೂರು ವೇದಗಳನ್ನು ಅಥವಾ ಎರಡು ಅಥವಾ ಕನಿಷ್ಠಪಕ್ಷ ತನ್ನ ಶಾಖೆಯ ಒಂದು ವೇದವನ್ನಾದರೂ ಮಂತ್ರ, ಬ್ರಾಹ್ಮಣ, ಆರಣ್ಯಕ, ಉಪನಿಷತ್ ಕ್ರಮದಿಂದ ಅಧ್ಯಯನ ಮಾಡಿದಮೇಲೆ ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕು.

ವೇದಾಧ್ಯಯನದ ಅನಂತರ, ನವಗ್ರಹಾರಾಧನೆ, ಪುಣ್ಯಾಹವಾಚನ, ಪಂಚಗವ್ಯ ಮೇಲನಕ್ರಮ, ನಾಂದೀಶ್ರಾದ್ಧ, ಅಗ್ನಿಮುಖಪ್ರಯೋಗದ ಅನಂತರ ಗರ್ಭಾಧಾನಾದಿ ಷೋಡಶಕರ್ಮಪ್ರಯೋಗಗಳನ್ನೂ; ನವಗ್ರಹಹೋಮವೇ ಮೊದಲಾದ ಹೋಮಗಳು, ಶಾಂತಿಗಳ ಕ್ರಮವನ್ನು ಕಲಿಯಬೇಕು. ಶ್ರಾದ್ಧ, ಮಹಾಲಯಗಳ ಪ್ರಯೋಗಗಳನ್ನು ತಿಳಿದುಕೊಳ್ಳಬೇಕು. ಇದನ್ನೆಲ್ಲ ಕಲಿಯುವಾಗ ಎಲ್ಲಾ ಪ್ರಯೋಗಗಳ ಮೊದಲು ಅದರ ಪೀಠಿಕೆಯನ್ನು ಅಂದರೆ ಆಯಾ ಪ್ರಯೋಗಕ್ಕೆ ಬೇಕಾಗುವ ಕಾರಿಕೆ, ಧರ್ಮಶಾಸ್ತ್ರ, ಜ್ಯೌತಿಷ, ಪ್ರಮಾಣಗಳನ್ನು ನೋಡಿ ಅರ್ಥಮಾಡಿಕೊಳ್ಳಬೇಕು. ಏಕೆಂದರೆ ಈ ಪ್ರಯೋಗಗಳನ್ನು ಯಾಕೆ, ಯಾವಾಗ ಮಾಡಬೇಕು? ಹೇಗೆ ಮಾಡಬೇಕು? ಮಾಡುವಾಗ ತಪ್ಪುಮಾಡಿದರೆ ಏನು ದೋಷ? ಇದಕ್ಕೇನು ಪ್ರಾಯಶ್ಚಿತ್ತ? ಸರಿಯಾಗಿ ಮಾಡಿದರೆ ಏನು ಫಲ? ಇದಕ್ಕೆ ತಿಥಿ, ವಾರ, ನಕ್ಷತ್ರ, ಲಗ್ನಗಳು ಯಾವುವು ಪ್ರಶಸ್ತ; ಯಾವುದು ತ್ಯಾಜ್ಯ ಎಂಬುದನ್ನೆಲ್ಲಾ ಎಲ್ಲಾ ಪ್ರಯೋಗಗಳ ಮೊದಲು ಹೇಳಿದ್ದಾರೆ. ಇದನ್ನೆಲ್ಲಾ ತಿಳಿದುಕೊಂಡು ಪ್ರಯೋಗಮಾಡಿಸಿದರೆ ಯಜಮಾನನಿಗೆ ಸತ್ಫಲ ದೊರೆಯುತ್ತದೆ. ಇದನ್ನೊಂದನ್ನೂ ತಿಳಿಯದೆ ಕೇವಲ ಪ್ರಯೋಗವನ್ನು ಮಾತ್ರ ಕಲಿತು ಪೌರೋಹಿತ್ಯ ಮಾಡಿದರೆ, ಮಾಡುವಾಗ ವ್ಯತ್ಯಾಸಗಳಾಗಿ ಅದರಿಂದ ತನಗೂ ಯಜಮಾನನಿಗೂ ದುಷ್ಫಲವೇ ಬರುತ್ತದೆ. ಅದೂ ಅಲ್ಲದೆ, ಈ ಪ್ರಯೋಗ ಮಾಡುತ್ತಿರುವಾಗ ಯಜಮಾನನಾಗಲೀ ಅಥವಾ ಬೇರೆಯವರಾಗಲೀ ಇದನ್ನು ಯಾಕೆ ಮಾಡಬೇಕು? ಹೀಗೆಯೇ ಮಾಡಬೇಕೆಂದಿದೆಯಾ? ಸ್ವಲ್ಪ ಹೆಚ್ಚು ಕಮ್ಮಿ ಮಾಡಿದರೇನು? ಇತ್ಯಾದಿ ಪ್ರಶ್ನೆ ಕೇಳಿದಾಗ ಮೊದಲು ತಾನು ಎಲ್ಲವನ್ನೂ ನೋಡಿ ತಿಳಿದುಕೊಂಡರೆ ತಾನೇ ಇನ್ನೊಬ್ಬರಿಗೆ ಸರಿಯಾದ ಶಾಸ್ತ್ರೋಕ್ತ ಉತ್ತರ ಕೊಡಲು ಸಾಧ್ಯ.

**ಸಂಧ್ಯಾ ಸ್ನಾನಂ ಜಪೋ ಹೋಮೋ ದೇವತಾನಾಂ ಚ ಪೂಜನಮ್ ।**
**ಆತಿಥ್ಯಂ ವೈಶ್ವದೇವಂ ಚ ಷಟ್ಕರ್ಮಾಣಿ ದಿನೇ ದಿನೇ ॥**

ಬ್ರಾಹ್ಮಣನು ಪ್ರತಿನಿತ್ಯ ಸಕಾಲದಲ್ಲಿ ಸ್ನಾನ, ಸಂಧ್ಯಾವಂದನೆ, ಜಪ, ದೇವರಪೂಜೆ, ಹೋಮ(ವೈಶ್ವದೇವ), ಅತಿಥಿಸತ್ಕಾರ –ಈ ಷಟ್ಕರ್ಮಗಳನ್ನು ಆಚರಿಸಲೇ ಬೇಕು.

## ಪೌರೋಹಿತ್ಯಕ್ಕೆ ಜೀವ ಮತ್ತು ಎರಡು ಕಣ್ಣುಗಳು

ಪೌರೋಹಿತ್ಯಕ್ಕೆ ಧರ್ಮಶಾಸ್ತ್ರ, ಜ್ಯೌತಿಷಗಳು ಎರಡು ಕಣ್ಣುಗಳಾದರೆ ಅದರ ಪ್ರಾಣ ಸಂಸ್ಕೃತಭಾಷಾಜ್ಞಾನ. ಪುರೋಹಿತನಾಗಬಯಸುವವನು ಪೌರೋಹಿತ್ಯವನ್ನು ಚೆನ್ನಾಗಿ ಬಲ್ಲ, ಆಚಾರವಂತನೂ, ಸಂಪ್ರದಾಯಜ್ಞನೂ ಆದ ಗುರುಗಳಿಂದ ಚೆನ್ನಾಗಿ ಅಭ್ಯಾಸ ಮಾಡಬೇಕು. ಅಷ್ಟೇ ಅಲ್ಲದೆ ಸ್ವಲ್ಪಕಾಲವಾದರೂ ಅವರ ಜೊತೆಯಲ್ಲಿಯೇ ಇದ್ದು ಅವರು ನಡೆಸುವ ಕ್ರಿಯೆಗಳನ್ನೆಲ್ಲಾ ಪರಿಶೀಲಿಸಿ ತಂತ್ರದ ವಿಷಯದಲ್ಲೂ, ಮಂತ್ರದ ವಿಷಯದಲ್ಲೂ ಎಲ್ಲವನ್ನೂ ಮೊದಲು ತಿಳಿದು ಕೊಳ್ಳಬೇಕು. ಜ್ಯೋತಿಷವನ್ನು ಚೆನ್ನಾಗಿ ಅಭ್ಯಾಸಮಾಡಬೇಕು. ಮುಹೂರ್ತ ಹೇಳಲಿಕ್ಕೂ ಷೋಡಶಕರ್ಮವೇ ಮೊದಲಾದ ಕರ್ಮಗಳನ್ನು ಯಾವಾಗ ಮಾಡಬೇಕು, ಯಾವ ತಿಥಿ–ವಾರ–ನಕ್ಷತ್ರ–ಮುಹೂರ್ತಗಳಲ್ಲಿ ಮಾಡಬೇಕೆಂಬುದನ್ನು ಹೇಳಬೇಕಾದರೆ ಜ್ಯೌತಿಷಶಾಸ್ತ್ರ ಗೊತ್ತಿದ್ದರೆ ಮಾತ್ರ ಸಾಧ್ಯ.

ಪ್ರಾಯಶ್ಚಿತ್ತಗಳನ್ನೂ ಆಶೌಚವೇ ಮೊದಲಾದ ವಿಷಯಗಳನ್ನು ಸಂಶಯ ಇಲ್ಲದೆ ಹೇಳಬೇಕಾದರೆ ಧರ್ಮಶಾಸ್ತ್ರ ತಿಳಿದಿರಬೇಕು.

ಪೌರೋಹಿತ್ಯದಲ್ಲಿ ಪಠಿಸಬೇಕಾದ ಎಲ್ಲಾ ಮಂತ್ರಗಳೂ, ಪ್ರಯೋಗದ ಮಾಹಿತಿ ಗಳೂ, ಸಂಸ್ಕೃತ ಭಾಷೆಯಲ್ಲೇ ಇರುವುದರಿಂದ ಸಂಸ್ಕೃತಭಾಷಾಜ್ಞಾನ ಇದ್ದರಷ್ಟೇ ಮಂತ್ರಾರ್ಥ ತಿಳಿದು, ಮಂತ್ರಪಠನೆಯಲ್ಲಿ ಏನೂ ಸ್ಖಾಲಿತ್ಯ ಬಾರದಂತೆ ಸ್ಪಷ್ಟವಾಗಿ ಮಂತ್ರಗಳನ್ನು ಉಚ್ಚರಿಸುತ್ತ ಕರ್ಮಗಳನ್ನು ಚೆನ್ನಾಗಿ ಮಾಡಿಸಬಹುದು. ಸಂಕಲ್ಪ ಮಾಡಿಸುವಾಗ, ಮಂತ್ರಾಕ್ಷತಕಾಲದಲ್ಲಿ ಆಶೀರ್ವಾದ ಹೇಳುವಾಗ ಕೃಚ್ಛ್ರಾಚರಣೆ ಮಾಡಿಸುವಾಗ ಸಂಸ್ಕೃತಭಾಷಾಜ್ಞಾನ

ಇಲ್ಲದೆ ಮಾಡಿಸಿದರೆ ಅದು ಯದ್ವಾತದ್ವಾ ಆಗುತ್ತದೆ. ಆ ಸಮಯದಲ್ಲಿ ಸಭೆಯಲ್ಲಿದ್ದವರೆಲ್ಲರೂ ಸುಮ್ಮನೇ ಕೇಳುತ್ತಿರುತ್ತಾರೆ. ಆಗ ಎಲ್ಲರಿಗೂ ಪುರೋಹಿತನ ಯೋಗ್ಯತೆ ಗೊತ್ತಾಗುತ್ತದೆ. ಆದ್ದರಿಂದ ಪುರೋಹಿತನಿಗೆ ಸಂಸ್ಕೃತಭಾಷಾಜ್ಞಾನ ಅಗತ್ಯ ಬೇಕು. ಸಂಸ್ಕೃತ ಭಾಷಾಜ್ಞಾನ ಚೆನ್ನಾಗಿ ಬರುವವರೆಗಾದರೂ ವೇದಾಂತ ಅಥವಾ ಕಾವ್ಯಗಳನ್ನಾದರೂ ಪಾಠ ಕೇಳಿ ತಿಳಿದುಕೊಳ್ಳಬೇಕು. ಪುರೋಹಿತನ ಜವಾಬ್ದಾರಿ ಎಂತಹದು? ಅದರ ನಿರ್ವಹಣೆಗಾಗಿ ಪುರೋಹಿತನಾಗಬಯಸುವವನು ತನ್ನಲ್ಲಿ ಎಂತಹ ಗುಣ, ಧರ್ಮಗಳನ್ನು ಅಳವಡಿಸಿಕೊಳ್ಳಬೇಕು? ಈ ಬಗ್ಗೆ ವಿಷ್ಣುಪುರಾಣ, ಮನುಸ್ಮೃತಿ ಮುಂತಾದ ಶಾಸ್ತ್ರ ಗ್ರಂಥಗಳಲ್ಲಿ ಧರ್ಮಗ್ರಂಥಗಳಲ್ಲಿ, ಸ್ಮೃತಿಗಳಲ್ಲಿ ಸಾಕಷ್ಟು ವಿವರಣೆ ಬಂದಿದೆ. ಯಾವುದೇ ಸಂಸ್ಕಾರವನ್ನು ಅಥವಾ ಧಾರ್ಮಿಕ ಕರ್ಮಗಳನ್ನು ಪರಿಚಯಿಸ ಹೊರಡುವ ಧರ್ಮಗ್ರಂಥ ಅಥವಾ ಸ್ಮೃತಿಗ್ರಂಥ ಮೊತ್ತ ಮೊದಲು ಆ ಕರ್ಮವನ್ನು ನಿರ್ವಹಿಸಲು ಎಂತಹ ಆಚಾರ್ಯನನ್ನು, ಪುರೋಹಿತನನ್ನು ಆರಿಸಿಕೊಳ್ಳಬೇಕೆಂಬುದನ್ನು ತಿಳಿಸುತ್ತದೆ. ತನ್ನ ರೋಗವನ್ನು ಸರಿಯಾಗಿ ಪರಿಹರಿಸಬಲ್ಲ ವೈದ್ಯನಾಗಬೇಕೆಂದು ರೋಗಿಯಾದವನು ಸಮರ್ಥ ವೈದ್ಯನನ್ನೇ ಆರಿಸಿಕೊಳ್ಳುವಂತೆ, ಯಾರು ನಡೆಸಿದ ಪೌರೋಹಿತ್ಯದಿಂದಾಗಿ ಕಾರ್ಯಕ್ರಮವು ಅತ್ಯಧಿಕವಾಗಿ ಶಾಸ್ತ್ರೀಯವಾಗಿ ನಡೆದು ಯಶಸ್ವಿ ಎನಿಸಿಬಲ್ಲದೋ ಅಂತಹ ಪುರೋಹಿತನಿಗೆ ಪ್ರಾಶಸ್ತ್ಯ ನೀಡಬೇಕೆಂದು ಧರ್ಮಶಾಸ್ತ್ರಗಳ ಅಭಿಪ್ರಾಯ. ಮನುಸ್ಮೃತಿ ಇಂತಹ ವ್ಯಕ್ತಿಯನ್ನೇ ಆಚಾರ್ಯ(ಪುರೋಹಿತ)ನನ್ನಾಗಿ ಆರಿಸಬೇಕೆಂದು ವಿವರಿಸಿದೆ.

**ಆಚಾರ್ಯಂ ವರಯೇತ್ಪೂರ್ವಂ ವೇದವೇದಾಂಗಪಾರಗಮ್ ।**
**ದೈವಜ್ಞಂ ಧಾರ್ಮಿಕಂ ಸತ್ಯವಾಚಂ ಬಹುಕುಟುಂಬಿನಮ್ ।**
**ಶೌಚಾಚಾರಗುಣೋಪೇತಂ ಧರ್ಮಶಾಸ್ತ್ರವಿಚಕ್ಷಣಮ್ ॥** –ಮ.ಸ್ಮೃ.

ವೇದ, ವೇದಾಂಗಗಳನ್ನು ಬಲ್ಲ ಜ್ಯೌತಿಷವನ್ನು ಹಾಗೂ ಧರ್ಮಶಾಸ್ತ್ರವನ್ನು ಅರಿತ, ಧಾರ್ಮಿಕನಾದ, ಸತ್ಯವನ್ನಾಡುವ, ಆದಷ್ಟು ದೊಡ್ಡ ಪ್ರಮಾಣದ ಪರಿವಾರ ಹೊಂದಿದ್ದು, ಶೌಚಾಚಾರಗಳಿಂದ ಸಂಪನ್ನನಾದಂತಹವನನ್ನು ಪುರೋಹಿತನನ್ನಾಗಿ ಆರಿಸಬೇಕು.

ವಿಷ್ಣುಪುರಾಣವೂ ಇಂತಹ ಪುರೋಹಿತನನ್ನು ಆರಿಸಬೇಕೆಂಬುದನ್ನು ತಿಳಿಸುತ್ತ, ಮನುಸ್ಮೃತಿಯಲ್ಲಿ ತಿಳಿಸಿದ ವಿಶೇಷಣಗಳಲ್ಲದೇ, ಮತ್ತೂ ಕೆಲವು ವಿಶೇಷಣಗಳನ್ನು ಉಲ್ಲೇಖಿಸಿದೆ–

**ಸರ್ವಾವಯವಸಂಪೂರ್ಣಂ ರೋಗದೋಷವಿವರ್ಜಿತಮ್ ।**
**ಶಾಂತಂ ಸುರೂಪಿಣಂ ದಾಂತಂ ಸರ್ವಪ್ರಾಣಿಹಿತೇ ರತಮ್ ।**
**ವಸ್ತ್ರೋಪವೀತಗಂಧಾದ್ಯೈರಂಗುಲೀಯಕಕುಂಡಲೈಃ ।**
**ಅಲಂಕೃತಂ........................ ॥** –ವಿ.ಪು.

ಯಾವುದೇ ಅವಯವದಿಂದ ಊನನಾಗಿರಬಾರದು, ರೋಗಗ್ರಸ್ತನಾಗಿರ ಬಾರದು, ವಸ್ತ್ರಗಂಧಾದಿಗಳಿಂದಲೂ, ಉಂಗುರ–ಕುಂಡಲಾದಿಗಳಿಂದಲೂ ಅಲಂಕೃತನಾಗಿರಬೇಕು. ಶಾಂತನಾಗಿಯೂ, ಇಂದ್ರಿಯನಿಗ್ರಹ ಉಳ್ಳವನಾಗಿಯೂ ಇರಬೇಕು. ಸರ್ವಪ್ರಾಣಿಹಿತಾಸಕ್ತನಾಗಿರಬೇಕು. ಇಂತಹ ವ್ಯಕ್ತಿಯನ್ನೇ ಪುರೋಹಿತನನ್ನಾಗಿ ಆರಿಸಿಕೊಳ್ಳಬೇಕು.

ಮೇಲಿನ ಪ್ರಮಾಣಗಳಿಂದ ಸ್ಪಷ್ಟವಾಗುವುದೇನೆಂದರೆ– ವೇದ, ವೇದಾಂತ ಶಾಸ್ತ್ರಜ್ಞಾನ, ಜ್ಯೌತಿಷ, ಧರ್ಮಶಾಸ್ತ್ರಗಳ ತಿಳಿವಳಿಕೆ ಪುರೋಹಿತರಿಗೆ ಇರಬೇಕೆಂಬುದು. 'ಬಹುಕುಟುಂಬಿನಂ' ಎಂಬುದರಿಂದ ಇವನು ಗೃಹಸ್ಥಾಶ್ರಮಿಯಾಗಿ ಮಕ್ಕಳು–ಪರಿವಾರದವರಿಂದ ಕೂಡಿದವನಾಗಬೇಕು. ಹಾಗಾದರಷ್ಟೇ ಅವನಿಗೆ ನೀಡಿದ ದಾನದಕ್ಷಿಣಾದಿಗಳು ಸದ್ವಿನಿಯೋಗವಾಗುವವು ಎಂದು ತಿಳಿಯುತ್ತದೆ.

ವಿಷ್ಣುಪುರಾಣದ ಕೆಲವು ವಿಶೇಷಣಗಳಿಂದ ಅವನಲ್ಲಿ ಯಾವುದೇ ಲೋಪದೋಷಗಳು, ರೋಗಗಳು ಇರಬಾರದು. ಅವನ ವೇಷ-ಭೂಷಣಗಳು ಸಮುಚಿತವಾಗಿರಬೇಕೆಂಬುದು ತಿಳಿದುಬರುವುದು. ಮತ್ತು ಪುರೋಹಿತನಲ್ಲಿ ಶೌಚಾಚಾರಗಳಿರಬೇಕೆಂಬುದನ್ನು ಮನುಸ್ಮೃತಿ ತಿಳಿಸಿದೆ. ಏಕೆಂದರೆ-

**ಶೌಚಾಚಾರವಿಹೀನಸ್ಯ ಸಮಸ್ತಾ ನಿಷ್ಫಲಾಃ ಕ್ರಿಯಾಃ ।**

ಶೌಚಾಚಾರರಹಿತನಾದವನ ಸಕಲಕ್ರಿಯೆಗಳೂ ನಿಷ್ಫಲಗಳಾಗುವವು. ಪೌರೋಹಿತ್ಯ ಮಾಡುವವನು ಮೊದಲು ಗುರುಮುಖದಿಂದ ಶಾಂತಿಪಾಠಪೂರ್ವಕ ವೇದಾಧ್ಯಯನ ಮಾಡಿದಾಗ ವೇದಮಂತ್ರಗಳನ್ನೆಲ್ಲಾ ಹೇಳಲು ಅರ್ಹತೆ ಬರುತ್ತದೆ. ಬೇರೆ ಬೇರೆ ಮಂತ್ರ ಹೋಮಗಳನ್ನೆಲ್ಲಾ ಮಾಡುವಾಗ ಆಯಾ ಮಂತ್ರಗಳನ್ನು ಗುರುಮುಖದಿಂದ ಉಪದೇಶ ಪಡೆದು, ಈ ಮಂತ್ರಗಳನ್ನು ಪ್ರತಿನಿತ್ಯ ಜಪ ಮಾಡುತ್ತಿರಬೇಕು. ಮಂತ್ರೋಪದೇಶ ಇಲ್ಲದೆ ಆ ಮಂತ್ರಗಳನ್ನೆಲ್ಲಾ ಪ್ರತಿನಿತ್ಯ ಜಪ ಮಾಡದೆ ಇದ್ದರೂ ಕೂಡ ಅಂಥವನು ಮಾಡುವ ಹೋಮಗಳಿಂದ ಯಜಮಾನ ನಿಗೂ, ಪುರೋಹಿತನಿಗೂ ಆಯಾ ಹೋಮದ ಫಲ ಬಾರದೆ ದುಷ್ಫಲ ಬರುತ್ತದೆ.

ಉಪನಯನದ ದಿನ ತಂದೆ ಅಥವಾ ಉಪನಯನ ಮಾಡಿದವರು ಗಾಯತ್ರೀ, ಅಷ್ಟಾಕ್ಷರೀ, ಪಂಚಾಕ್ಷರೀಮಂತ್ರ ಮಾತ್ರ ಉಪದೇಶ ಮಾಡುತ್ತಾರೆ. ಇದನ್ನು ಉಪನಯನದ ಅನಂತರ ಪ್ರತಿನಿತ್ಯ ಜಪಿಸುತ್ತಿರಬೇಕು. ಮತ್ತೆ ಪೌರೋಹಿತ್ಯ ಮಾಡಲು ಪ್ರಾರಂಭ ಮಾಡುವಾಗ, ಪೌರೋಹಿತ್ಯಕ್ಕೆ ಸಂಬಂಧಪಟ್ಟ ಎಲ್ಲಾ ಹೋಮಗಳಿಗೂ, ದುರ್ಗಾನಮಸ್ಕಾರ ಇತ್ಯಾದಿ ಪೂಜೆಗಳಿಗೂ ಬೇಕಾಗುವ ಎಲ್ಲಾ ಮಂತ್ರಗಳನ್ನು ತಿಳಿದು ಪ್ರತಿನಿತ್ಯ ಅನುಷ್ಠಾನ ಮಾಡುವ ಒಳ್ಳೆಯ ಗುರುಗಳಿಂದ ಶುಭಮುಹೂರ್ತದಲ್ಲಿ ಉಪದೇಶಪಡೆದು, ಆ ಮಂತ್ರಗಳನ್ನೆಲ್ಲಾ ಪ್ರತಿನಿತ್ಯ ಜಪಿಸುತ್ತಿದ್ದರೆ ಮಾತ್ರ ಆಯಾ ಪೂಜಾ-ಹೋಮಗಳನ್ನು ಮಾಡಲು ಅರ್ಹತೆಯುಳ್ಳವನಾಗುತ್ತಾನೆ. ಈ ಮಂತ್ರ ಗಳನ್ನೆಲ್ಲಾ ಪ್ರತಿನಿತ್ಯ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಜಪ ಮಾಡುತ್ತಾ ಬಂದರೆ ಆ ಮಂತ್ರಗಳಿಂದ ಮಾಡಿದ ಪೂಜಾ-ಹೋಮಾದಿಗಳಿಗೆ ಕೂಡಲೇ ಸತ್ಫಲ ಬರುತ್ತದೆ.

ಪವಿತ್ರ ಧರಿಸಿ, ಆಸನ ಪ್ರಾಣಾಯಾಮಗಳನ್ನು ಮಾಡಿಕೊಂಡು (ಉಪದೇಶ ವಿದ್ದವರು ತತ್ವನ್ಯಾಸ, ಮಾತೃಕಾನ್ಯಾಸ ಮಾಡಿಕೊಂಡು) ಇಲ್ಲದಿದ್ದರೆ 'ಸರ್ವಾಭ್ಯ-ಸ್ತತ್ವದೇವತಾಭ್ಯೋ ನಮಃ, ಸರ್ವಾಭ್ಯೋ ಮಾತೃಕಾದೇವತಾಭ್ಯೋ ನಮಃ' ಎಂದು ಹೇಳಿ ಸಂಕಲ್ಪ ಮಾಡಬೇಕು. ನಾವು ಯಾವ ಕರ್ಮ ಮಾಡುವಾಗಲೂ ನಿಷ್ಕಾಮವಾಗಿ ಮಾಡಬೇಕು.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।** -ಭ.ಗೀ.

ನಿನಗೆ ಕರ್ಮಮಾಡಲು ಮಾತ್ರ ಅಧಿಕಾರ. ಫಲಾಪೇಕ್ಷೆ ಮಾಡಬಾರದು.

**ನೇಹಾಭಿಕ್ರಮನಾಶೋऽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥** -ಭ.ಗೀ.

ಫಲಾಪೇಕ್ಷೆಯಿಂದ (ಸಕಾಮ) ಮಾಡುವ ಕರ್ಮ ನ್ಯೂನಾತಿರೇಕ ಇಲ್ಲದೆ ವಿಧಿಪ್ರಕಾರ ಸಾಂಗೋಪಾಂಗವಾಗಿ ಪೂರ್ತಿ ನಡೆಯದಿದ್ದರೆ ವಿಪರೀತ ದುಷ್ಫಲ. ಫಲಾಪೇಕ್ಷೆ ಇಲ್ಲದೆ ಕೇವಲ ಶ್ರೀಹರಿಪ್ರೀತಿಗಾಗಿ(ನಿಷ್ಕಾಮ) ಮಾಡಿ ಕರ್ಮ ಪೂರ್ತಿಯಾಗದೆ, ಅರ್ಧದಲ್ಲಿ ನಿಂತರೆ, ಅರ್ಧದಲ್ಲಿ ನಿಂತ ದೋಷವಿಲ್ಲ. ಸ್ವಲ್ಪವನ್ನಾದರೂ ಮಾಡಿದ್ದಕ್ಕೆ ಮಹಾಭಯದಿಂದ ರಕ್ಷಿಸಲ್ಪಡುತ್ತಾನೆ. ಒಂದರ್ಥ ಇದಾದರೆ, 'ಸ್ವಲ್ಪಮಪಿ ಅಸ್ಯ ಧರ್ಮಸ್ಯ- ಯಮಧರ್ಮಸ್ಯ ಮಹತೋ ಭಯಾತ್ ತ್ರಾಯತೇ' -ಯಮಧರ್ಮನ ಮಹಾಭಯದಿಂದಲೂ ರಕ್ಷಿಸಲ್ಪಡುತ್ತಾನೆ ಎಂಬುದು ಇನ್ನೊಂದರ್ಥ.

**ಸಕಾಮೇಭ್ಯೋಽಮಿತಗುಣಾಃ ಯಾ ಅಕಾಮೈಸ್ತು ಕೃತಾಃ ಕ್ರಿಯಾಃ ।**
**ತಸ್ಮಾದಕಾಮ ಏವಾಲಂ ಭಜೇದ್ವಿಷ್ಣುಂ ಸನಾತನಮ್ ॥** –ತಂ.ಸಾ.ಸಂ.

ಫಲಾಪೇಕ್ಷೆಯಿಂದ ಮಾಡಿದ ಕರ್ಮಕ್ಕಿಂತಲೂ ಅಮಿತಫಲ ನಿಷ್ಕಾಮದಿಂದ ಮಾಡಿದ ಕರ್ಮಕ್ಕೆ ಬರುವುದರಿಂದ ಎಲ್ಲರೂ ನಿಷ್ಕಾಮಕರ್ಮವನ್ನೇ ಮಾಡಬೇಕು.

**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।** –ಭ.ಗೀ.

ಸ್ವವರ್ಣಾಶ್ರಮೋಚಿತವಾದ ಎಲ್ಲಾ ಕರ್ಮಗಳನ್ನೂ ಶ್ರೀಹರಿಪ್ರೀತಿಗಾಗಿ, ಶ್ರೀಹರಿಯ ಪೂಜಾರೂಪವಾಗಿ ಶ್ರದ್ಧಾಭಕ್ತಿಗಳಿಂದ ಮಾಡಿ ಶ್ರೀಹರಿಗೆ ಅರ್ಪಿಸಿದಾಗ ಅವರವರ ಯೋಗ್ಯತೆಗನುಗುಣವಾಗಿ ಸಿದ್ಧಿಯನ್ನು ಹೊಂದುತ್ತಾರೆ.

**ಸರ್ವಾ ಕ್ರಿಯಾ ಹರೌ ಭಕ್ತ್ಯಾ ಹರಿಭಕ್ತೈಃ ಸ್ವನುಷ್ಠಿತಾ ।**
**ಗುರುಭಕ್ತೈಃ ಸದಾಚಾರೈಃ ಫಲಂತ್ಯದ್ಧಾ ನ ಚಾನ್ಯಥಾ ॥** –ತಂ.ಸಾ.ಸಂ.

ಜಪ ಹೋಮ ಮುಂತಾದ ಯಾವುದೇ ಕ್ರಿಯೆಯಾದರೂ ಹರಿಭಕ್ತಿಯಿಂದ, ಹರಿಗುರುಭಕ್ತರಿಂದ, ಆಚಾರಸಂಪನ್ನರಿಂದ ಆಚರಿಸಲ್ಪಟ್ಟರೆ ಮಾತ್ರ ಫಲಿಸಬಲ್ಲದು. ಹೊರತು ಅಭಕ್ತರಿಗಲ್ಲ.

ನಾವು ಮಾಡುವ ಎಲ್ಲಾ ಕರ್ಮಗಳಿಗೆ ಎಷ್ಟು ಹಣ ಖರ್ಚು ಮಾಡಿದ್ದೇವೆ, ಎಷ್ಟು ಶ್ರಮಪಟ್ಟಿದ್ದೇವೆ ಎಂಬ ಕಾರಣಕ್ಕಾಗಿ ಫಲ ಬರುವುದಲ್ಲ. ಹೇಗೆ ಮಾಡಿದ್ದೇವೆ ಎಂಬುದಕ್ಕೆ ಫಲ.

**ಮಂತ್ರತಂತ್ರೋಪಕರಣಕರ್ತೃವಹ್ನಿಷು ಕೇಶವಮ್ ।**
**ದೇಶೇ ಕಾಲೇ ಚ ಮನ್ವಾನಾಃ ಚಕ್ರುಸ್ತೇ ಕರ್ಮ ನಿರ್ಮಲಮ್ ॥** –ತಂ.ಸಾ.ಸಂ.

ನಾವು ನುಡಿಯುವ ಮಂತ್ರ, ನಡೆಸುವ ತಂತ್ರ, ಬಳಸುವ ಸಾಮಗ್ರಿ, ಯಜಮಾನ, ಅಗ್ನಿ, ದೇಶ, ಕಾಲ – ಈ ಎಲ್ಲವುಗಳಲ್ಲಿಯೂ ಶ್ರೀಕೇಶವನ ಸನ್ನಿಧಾನವಿದೆ ಎಂಬ ಅನುಸಂಧಾನವನ್ನಿಟ್ಟುಕೊಂಡು,

**ಮಂತ್ರಮಧ್ಯೇ ಕ್ರಿಯಾಮಧ್ಯೇ ವಿಷ್ಣೋಃ ಸ್ಮರಣಪೂರ್ವಕಮ್ ।**
**ಯತ್ಕಿಂಚಿತ್ಕುರುತೇ ಕರ್ಮ ತತ್ಕರ್ಮ ಸಫಲಂ ಕುರು ॥**

ಮಂತ್ರಮಧ್ಯದಲ್ಲಿ, ಕ್ರಿಯಾಮಧ್ಯದಲ್ಲಿ ಶ್ರೀಹರಿಯ ಸ್ಮರಣಪೂರ್ವಕವಾಗಿ ಏನೇನು ನಡೆಸಲ್ಪಟ್ಟಿದೆಯೋ ಅದೆಲ್ಲವನ್ನೂ ಸಾರ್ಥಕಗೊಳಿಸು ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತ ನಡೆಸಬೇಕು.

ಪುರೋಹಿತನು ತಾನು ಮಾಡತಕ್ಕ ತನ್ನ ನಿತ್ಯಾನುಷ್ಠಾನಗಳೆಲ್ಲವನ್ನೂ ಶ್ರದ್ಧೆಯಿಂದ ಸಾಧ್ಯವಿದ್ದಷ್ಟು ಸಕಾಲದಲ್ಲಿ ಪೂರೈಸಿಕೊಂಡೇ ಇನ್ನೊಬ್ಬರಿಗೆ ಪೌರೋಹಿತ್ಯವನ್ನು ಮಾಡಬೇಕು. ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ ಇವು ಷಟ್ಕರ್ಮ. ಷಟ್ಕರ್ಮಿಗಳಾದ ಬ್ರಾಹ್ಮಣರಿಗೆ ಈ ಆರು ಕರ್ಮಗಳನ್ನು ಮಾಡಲು ಅಧಿಕಾರವಿದೆ. ಇದರಲ್ಲಿ ವೇದಾಧ್ಯಯನ ಮಾಡುವುದು, ಹೋಮ ಮಾಡಿಸುವುದು, ದಾನ ಕೊಡುವುದು ಈ ಮೂರು ಶ್ರೇಯಸ್ಸಿಗಾದರೆ; ಅಧ್ಯಾಪನ, ಪೌರೋಹಿತ್ಯ, ಪ್ರತಿಗ್ರಹ ಈ ಮೂರು ಜೀವನಕ್ಕಾಗಿ. 'ಸ್ವಕರ್ಮ ವಿಪ್ರಸ್ಯ ಜಪೋಪದೇಶೌ' (ತಾ.ನಿ.) ಬ್ರಾಹ್ಮಣನು ವೇದ, ವೇದಾಂತಾದಿ ಸಚ್ಛಾಸ್ತ್ರ ಕಲಿತು, ಸಕಾಲದಲ್ಲಿ ಜಪ, ಉಪದೇಶ ಮಾಡುತ್ತಾ ಜೀವನ ಮಾಡುವುದು ಉತ್ತಮ ಜೀವನ. 'ಶಿಷ್ಯಯಾಜ್ಯೋಪಲಬ್ಧೈರ್ವಾ' (ತಾ.ನಿ) ಪೌರೋಹಿತ್ಯದಿಂದ ಜೀವನ ಮಾಡುವುದು ಮಧ್ಯಮಜೀವನ. ಅಧ್ಯಾಪನ, ಕೇವಲ ಪ್ರತಿಗ್ರಹದಿಂದ ಜೀವನ ಮಾಡುವುದು ಅಧಮಜೀವನ.

**ಶ್ರೇಯಾನ್ ಸ್ವಧರ್ಮೋಽವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥** –ಭ.ಗೀ.

ತನಗೆ ಹೇಳದ ಪರಧರ್ಮವನ್ನು ಚೆನ್ನಾಗಿ ಆಚರಿಸುವುದಕ್ಕಿಂತಲೂ ಸ್ವಲ್ಪವಾದರೂ ತನಗೆ ಹೇಳಿರುವ ವರ್ಣಾಶ್ರಮೋಚಿತ ಧರ್ಮವನ್ನು ಆಚರಿಸುವುದು ಶ್ರೇಯಸ್ಸು. ಸಹಜವಾದ ಧರ್ಮದಲ್ಲಿ (ಸ್ವಧರ್ಮ) ಮರಣವಾದರೂ ಮೇಲು. ಪರಧರ್ಮ ಅದಕ್ಕಿಂತ ಭಯಂಕರ. ಪ್ರಾಯಶ್ಚಿತ್ತವೇ ಇಲ್ಲದ ಪರಧರ್ಮಾಚರಣೆಗಿಂತ ಸ್ವಧರ್ಮಾಚರಣೆಯಲ್ಲಿ ಬರತಕ್ಕ ಪಾಪಗಳಿಗೆ ಪ್ರಾಯಶ್ಚಿತ್ತವಿದೆ. ಪ್ರಾಯಶ್ಚಿತ್ತದಿಂದ ಪಾಪಪರಿಹಾರವಾಗುತ್ತದೆ.

**ಕೃತೇ ಪಾಪೇऽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ ।**
**ಪ್ರಾಯಶ್ಚಿತ್ತಂ ತು ತಸ್ಯೋಕ್ತಂ ಹರಿಸಂಸ್ಮರಣಂ ಪರಮ್ ॥** –ಕೃ.ಮ.

ಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪ ಪಟ್ಟುಕೊಂಡ ಜನರಿಗೆ ಭಗವದ್ಭಕ್ತಿ, ಭಗವತ್ಸ್ಮರಣೆಯೆಂಬ ಪ್ರಾಯಶ್ಚಿತ್ತ ಇದ್ದೇ ಇದೆ. 'ಆಯುಷ್ಯಂ ಸಾರ್ಥಕಂ ಕುರು'; (ಗ.ಪು.). ನಮ್ಮ ಆಯುಷ್ಯವನ್ನು ಆದಷ್ಟು ಸಾರ್ಥಕ ಮಾಡಿಕೊಳ್ಳಬೇಕೆಂದಿದೆ. ನಾವು ಪೌರೋಹಿತ್ಯ ಮಾಡುವುದು ಇನ್ನೊಬ್ಬರಿಗಾದರೂ ಅಗತ್ಯವಿಲ್ಲದ ಬೇರೆ ಮಾತುಗಳನ್ನಾಡದೆ, ಜಪ–ಪಾರಾಯಣ–ಪೂಜೆ–ಹೋಮ ಮಾಡುವಾಗ ಮಧ್ಯೇ ಮಧ್ಯೇ ಹರಿಸ್ಮರಣಪೂರ್ವಕ ಅನುಸಂಧಾನ ಮಾಡಿಕೊಂಡು ಮಂತ್ರ ಹೇಳಿದರೆ ನಮ್ಮ ಆಯುಷ್ಯದಲ್ಲಿ ಅಷ್ಟು ಸಮಯವಾದರೂ ಸಾರ್ಥಕವಾಗುತ್ತದಷ್ಟೇ! ಪುರೋಹಿತನು ಯಜಮಾನರು ಯಾವ ಕರ್ಮ ಮಾಡಿಸಬೇಕೆಂದು ಹೇಳುತ್ತಾರೋ ಅಂಥವರಿಗೆ ಮೊದಲಾಗಿ ಮಾಡಿಸುವ ಕರ್ಮದ ವಿಧಿವಿಧಾನಗಳನ್ನು ಶಾಸ್ತ್ರೋಕ್ತವಾಗಿ ಹೇಳಬೇಕು. ಹೀಗೆ ಹೇಳಿದಾಗ ಅವರು ಮಾಡಿಸುವ ಕರ್ಮದಲ್ಲಿ ಶ್ರದ್ಧೆ, ಭಕ್ತಿ ಬರುತ್ತದೆ. ನಾವು ಪೌರೋಹಿತ್ಯವನ್ನು ಮಾಡಿಸುವುದನ್ನು ನೋಡಿಯೂ, ನಮ್ಮ ಉಪದೇಶದಿಂದಲೂ, ಶ್ರದ್ಧಾ–ಭಕ್ತಿ ಇಲ್ಲದವನಿಗೆ ಶ್ರದ್ಧಾ–ಭಕ್ತಿ ಬರಬೇಕು. ಇದ್ದವನಿಗೆ ಶ್ರದ್ಧಾ–ಭಕ್ತಿ ಅತಿಶಯವಾಗಬೇಕು.

ಯಜಮಾನರ ಅನುಕೂಲಕ್ಕೆ ಅನುಗುಣವಾಗಿ ಸಾಮಾನಿನ ಪಟ್ಟಿಯನ್ನು ಕೊಡಬೇಕು. ಅದಕ್ಕೆ ಸರಿಯಾಗಿ ಕರ್ಮ ಮಾಡಿಸಬೇಕು. ಕರ್ಮಾಂಗದ ಮಂತ್ರದಲ್ಲಿ ಮಾತ್ರ ಲೋಪ ಮಾಡಬಾರದು. ಮಂತ್ರಲೋಪ ಮಾಡಿದರೆ 'ಮಂತ್ರಹೀನಂ ತು ಋತ್ವಿಜಃ' ಪುರೋಹಿತರಿಗೆ ಅರಿಷ್ಟ. ಅನುಕೂಲ ಇದ್ದವರ ಹತ್ತಿರ ಉಪದೇಶ ಪಡೆದು ಧರ್ಮಕಾರ್ಯ ಜಾಸ್ತಿ ಮಾಡಿಸಬೇಕು.

**ಯಸ್ಯೋಪದೇಶತಃ ಪುಣ್ಯಂ ಪಾಪಂ ವಾ ಕುರುತೇ ಜನಃ ।**
**ಸ ತದ್ಭಾಗೀ ಭವೇನ್ಮರ್ತ್ಯ ಇತಿ ಶಾಸ್ತ್ರೇಷು ನಿರ್ಣಯಃ ॥** –ಭವಿಷ್ಯಪುರಾಣ

ಯಾರ ಉಪದೇಶದಿಂದ ಒಬ್ಬ ಪುಣ್ಯಕಾರ್ಯ ಅಥವಾ ಪಾಪಕಾರ್ಯವನ್ನು ಮಾಡುತ್ತಾನೋ ಅದರಲ್ಲಿ ಕೆಲವಂಶ ಉಪದೇಶ ಮಾಡಿದವನಿಗೆ ಬರುತ್ತದೆ. 'ದಾನೇ ದತ್ತೇ ನಿವಾರಕಃ' (ಗಾರುಡ) ದಾನ ಮಾಡಬೇಕೆಂದು ಇದ್ದವನನ್ನು ತಡೆದು ಮಾಡಿಸದಿದ್ದರೆ ಆ ಪಾಪದಲ್ಲಿಯೂ ಇವನಿಗೆ ಪಾಲು ಇದೆ. ಆದ್ದರಿಂದ ಪುರೋಹಿತರು ಸಾಧ್ಯವಿದ್ದಷ್ಟು ಅನುಕೂಲ ಇದ್ದವರಿಗೆ ಉಪದೇಶಮಾಡಿ ಅವರಿಂದ ಧರ್ಮಕಾರ್ಯ ಮಾಡಿಸಬೇಕು. ತಡೆಯಬಾರದು. ಯಜಮಾನನು ದಕ್ಷಿಣೆ ಕೊಟ್ಟದ್ದರಲ್ಲಿ ತೃಪ್ತನಾಗಬೇಕು. 'ಅಸಂತುಷ್ಟೋ ದ್ವಿಜೋ ನಷ್ಟಃ' ಬ್ರಾಹ್ಮಣನು ಅಸಂತುಷ್ಟನಾಗುವುದು ಶ್ರೇಯಸ್ಕರವಲ್ಲ. 'ಯದೃಚ್ಛಾಲಾಭಸಂತುಷ್ಟೋ ಬ್ರಾಹ್ಮಣೋ ನಾವಸೀದತಿ' (ನೀತಿಶಾಸ್ತ್ರ) –ಬಂದದ್ದರಲ್ಲಿ ಸುಪ್ರೀತನಾದ ಬ್ರಾಹ್ಮಣನಿಗೆ ಯಾವಾಗಲೂ ಅಧಃಪತನವಿಲ್ಲ. 'ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಸ್ವಿದ್ಧನಂ' (ಈ.ಉ.) ಪರಮಾತ್ಮನಿಂದ ದತ್ತವಾಗಿ ಬಂದುದರಿಂದ ತೃಪ್ತನಾಗು. ಇನ್ನೊಬ್ಬರ ಹಣಕ್ಕೆ ಆಸೆ ಪಡಬೇಡ.

ಪುರೋಹಿತರ ವೇಷಭೂಷಣಗಳು ವೈದಿಕವೃತ್ತಿಗೆ ಸರಿಯಾಗಿರಬೇಕು.

**ವಸ್ತ್ರೇಣ ವಪುಷಾ ವಾಚಾ ವಿದ್ಯಯಾ ವಿನಯೇನ ಚ ॥** –ನೀ.ಶಾ.

ಒಳ್ಳೆಯ ವಸ್ತ್ರವನ್ನು ಷಟ್ಬುಚ್ಛವಾಗಿ ಉಟ್ಟುಕೊಳ್ಳಬೇಕು. ಶರೀರದಾರ್ಢ್ಯ, ವಿದ್ಯೆ, ಸಭಾಕಂಪ ಇಲ್ಲದ ವಾಕ್ಪಟುತ್ವ, ವಿನಯಾದಿ ಗುಣಗಳುಳ್ಳವರಿಗೆ ಹೋದಲ್ಲೆಲ್ಲಾ ಕಡೆಗಳಲ್ಲಿಯೂ ಗೌರವ ಸಿಗುತ್ತದೆ. ಯಜಮಾನನಿಗೆ ಮುಂದೆ ಬರತಕ್ಕ ಅರಿಷ್ಟಗಳನ್ನು ಪರಿಹರಿಸಿ, ಅವನ ಹಿತವನ್ನು ಬಯಸುವವನೇ ಪುರೋಹಿತ.

## ಧರ್ಮಾಚರಣೆ ಮತ್ತು ಆತ್ಮೋದ್ಧಾರ

'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ' (ನಾ.ಉ.) –ವಿಶಾಲವಾದ ಹದಿನಾಲ್ಕು ಲೋಕಕ್ಕೂ ಧರ್ಮವೇ ಮುಖ್ಯ ಕಾರಣ. 'ಧರ್ಮ ಏವ ಹತೋ ಹಂತಿ' –ಯಾರಿಂದ ಧರ್ಮನಾಶವಾಗುತ್ತದೋ ಅವರನ್ನು ಧರ್ಮವೇ ನಾಶ ಮಾಡುತ್ತದೆ. 'ಧರ್ಮೋ ರಕ್ಷತಿ ರಕ್ಷಿತಃ' –ಯಾರಿಂದ ಧರ್ಮರಕ್ಷಣೆಯಾಗುತ್ತದೆಯೋ ಅವರನ್ನು ಧರ್ಮವೇ ರಕ್ಷಿಸುತ್ತದೆ.

'ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋ ಧರ್ಮಃ, ತದ್ವಿರುದ್ಧಃ ಸರ್ವೋಽಪ್ಯಧರ್ಮಃ' (ಗೀ.ತಾ.) –ತನ್ನ ವರ್ಣಾಶ್ರಮೋಚಿತವೃತ್ತಿಯಿಂದ ಭಕ್ತಿಯಿಂದ ಭಗವಂತನ ಆರಾಧನೆ(ಪೂಜೆ)ಯೇ ಶ್ರೇಷ್ಠಧರ್ಮ. ಇದಕ್ಕೆ ವಿರುದ್ಧ ವಾದುದೆಲ್ಲವೂ ಅಧರ್ಮ.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಃ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥**

ಯಾರಿಂದ ಜೀವಿಗಳ ಚಟುವಟಿಕೆಯೋ, ಯಾರು ಈ ಎಲ್ಲವನ್ನೂ ತುಂಬಿ ನಿಂತಿರುವನೋ ಅಂಥಾ ಭಗವಂತನನ್ನು ಮನುಷ್ಯನು ಸ್ವಭಾವಸಹಜವಾದ ಕರ್ಮದಿಂದ ಆರಾಧಿಸಿ ಸಿದ್ಧಿ ಪಡೆಯುತ್ತಾನೆ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್** –ಭ.ಗೀ.

ಚೆನ್ನಾಗಿ ಆಚರಿಸಿದ ಪರಧರ್ಮಕ್ಕಿಂತ ಆಚರಣೆಯಲ್ಲಿ ಕೊರತೆ ಇದ್ದರೂ ತನ್ನ ಸಹಜಧರ್ಮ ಶ್ರೇಷ್ಠ. ತನ್ನ ಸ್ವಭಾವಕ್ಕೆ ತಕ್ಕುದಾದ ಕರ್ಮ ಮಾಡಿದರೆ ಪಾಪ ತಟ್ಟುವುದಿಲ್ಲ.

**ಧರ್ಮೇಣ ಹನ್ಯತೇ ವ್ಯಾಧಿಃ ಧರ್ಮೇಣಾಯುಃ ಪ್ರವರ್ಧತೇ ।**
**ಧರ್ಮ ಏವಾಪವರ್ಗಾಯ ತಸ್ಮಾದ್ಧರ್ಮಂ ಸಮಾಚರೇತ್ ॥** –ವಿ.ಸ್ಮೃ

ಧರ್ಮದಿಂದ ವ್ಯಾಧಿ ಪರಿಹಾರ. ಧರ್ಮದಿಂದ ಆಯುಷ್ಯಾಭಿವೃದ್ಧಿ. ಮೋಕ್ಷಪ್ರಾಪ್ತಿಗೂ ಧರ್ಮವೇ ಕಾರಣ. ಆದ್ದರಿಂದ ಧರ್ಮಾಚರಣೆಯನ್ನು ಚೆನ್ನಾಗಿ ಮಾಡಬೇಕು. ಧರ್ಮ, ಅರ್ಥ, ಕಾಮ, ಮೋಕ್ಷವೆಂಬವು ಪುರುಷಾರ್ಥ-ಚತುಷ್ಟಯ.

**ಅಂತೇಷು ರೇಮಿರೇ ಧೀರಾಃ ನ ತೇ ಮಧ್ಯೇಷು ರೇಮಿರೇ ।**
**ಅಂತಪ್ರಾಪ್ತಿಂ ಸುಖಂ ಪ್ರಾಹುಃ ದುಃಖಮಂತರಮಂತಯೋಃ ॥** –ಮ.ಭಾ.

ಜ್ಞಾನಿಗಳು ಈ ಪುರುಷಾರ್ಥಚತುಷ್ಟಯದ ಮೊದಲಿನ ಧರ್ಮದಲ್ಲೇ ನಿರತರಾಗಿ, ಕೊನೆಯ ಮೋಕ್ಷವನ್ನು ಹೊಂದಿ ಸಂತುಷ್ಟರಾಗುತ್ತಾರೆ. ಮಧ್ಯದಲ್ಲಿರುವ ಅರ್ಥ ಮತ್ತು ಕಾಮದಲ್ಲಿ ಪ್ರವೃತ್ತರಾಗುವುದೇ ಇಲ್ಲ. ಇದರಲ್ಲಿ ಪ್ರವೃತ್ತರಾಗುವವರು ಮಧ್ಯೇ ಮಧ್ಯೇ ದುಃಖ ಅನುಭವಿಸುತ್ತಲೇ ಇರಬೇಕು. ಇದರ ಮಧ್ಯದ ಅರ್ಥ ಕಾಮಗಳನ್ನು ಧರ್ಮಕ್ಕೆ ಸರಿಯಾಗಿ ಅಳವಡಿಸಿಕೊಂಡು ನಡೆದರೆ ಎಲ್ಲರೂ ಕೊನೆಯ ಮೋಕ್ಷವನ್ನು ಪಡೆಯಬಹುದು.

**ಊರ್ಧ್ವಬಾಹುರ್ವಿರೌಮ್ಯೇಷೋ ನ ಚ ಕಶ್ಚಿತ್ ಶೃಣೋತಿ ಮಾಮ್ ।**
**ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥** –ವೇದವ್ಯಾಸಃ

ಕೈಯೆತ್ತಿ, ಬೊಬ್ಬಿಟ್ಟು ಹೇಳುತ್ತಿದ್ದೇನೆ; ನನ್ನ ಮಾತನ್ನು ಯಾರೂ ಕೇಳುವುದಿಲ್ಲ. ಧರ್ಮಾಚರಣೆ ಮಾಡುವುದರಿಂದಲೇ ಅರ್ಥ(ಜ್ಞಾನ)ಸಿದ್ಧಿಯೂ, ಇಷ್ಟಾರ್ಥವೂ ಆಗುವುದು. ಯಾಕೆ ಧರ್ಮಾಚರಣೆ ಮಾಡುವುದಿಲ್ಲ?

ಯುಧಿಷ್ಠಿರ ಉವಾಚ–

**ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ ।**
**ಕಿಂ ಜಪನ್ ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥** –ಮ.ಭಾ.

ಮಹಾಭಾರತದಲ್ಲಿ ಭೀಷ್ಮಾಚಾರ್ಯರು ಯುಧಿಷ್ಠಿರಾದಿಗಳಿಗೆ ಎಲ್ಲಾ ಧರ್ಮಗಳನ್ನೂ ಉಪದೇಶಮಾಡಿದ ಅನಂತರ, ನೀವು ಹೇಳಿರುವ ಎಲ್ಲಾ ಧರ್ಮಗಳಲ್ಲಿ ನಿಮಗೆ ಅಭಿಮತವಾದ ಶ್ರೇಷ್ಠಧರ್ಮ ಯಾವುದು? ಯಾವುದನ್ನು ಜಪ ಮಾಡುವುದರಿಂದ ಮನುಷ್ಯನು ಈ ಸಂಸಾರಬಂಧನದಿಂದ ಮುಕ್ತಿ ಹೊಂದುತ್ತಾನೆ? ಎಂದು ಯುಧಿಷ್ಠಿರ ಕೇಳಿದಾಗ,

ಭೀಷ್ಮ ಉವಾಚ–

**ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ ।**
**ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ ॥** –ಮ.ಭಾ.

ಯಾರು ಸದಾ ಭಕ್ತಿಯಿಂದ ಭಗವಂತನನ್ನು ಈ ವಿಷ್ಣುಸಹಸ್ರನಾಮಸ್ತೋತ್ರದಿಂದ ಅರ್ಚನೆಮಾಡಿ ಪೂಜೆ ಮಾಡುತ್ತಾರೋ, ನಾನು ಹೇಳಿರುವ ಸರ್ವಧರ್ಮಗಳಲ್ಲಿ ಅತ್ಯುತ್ತಮವಾದ ಧರ್ಮ ಇದೇ ಎಂದು ಭೀಷ್ಮಾಚಾರ್ಯರು ಹೇಳಿದರು. ಇದನ್ನೇ ಭಕ್ತಿಯಿಂದ ಜಪ(ಪಾರಾಯಣ) ಮಾಡುವುದರಿಂದ ಮನುಷ್ಯನು ಸರ್ವಪಾಪಗಳಿಂದಲೂ ಸಂಸಾರಬಂಧನದಿಂದಲೂ ಮುಕ್ತನಾಗಿ ಮೋಕ್ಷ ಹೊಂದುತ್ತಾನೆ. 'ಸತ್ಯಂ ವದ, ಧರ್ಮಂ ಚರ' ಯಾವಾಗಲೂ ಸತ್ಯವನ್ನೇ ಹೇಳು, ಧರ್ಮಾಚರಣೆ ಮಾಡು.

**ಗೀತಾ ಗಂಗಾ ತಥಾ ವಿಷ್ಣುಃ ಕಪಿಲಾಶ್ವತ್ಥಸೇವನಮ್ ।**
**ಏಕಾದಶೀವ್ರತಂ ಚೈವ ಷಡ್ಭಮಂ ನ ಕಲೌ ಯುಗೇ ॥** –ಸ್ಮೃ.ರ.

ಪ್ರತಿನಿತ್ಯ ಗೀತಾಪಾರಾಯಣ, ಗಂಗಾಸ್ನಾನ(ಸ್ಮರಣೆ), ವಿಷ್ಣುಸಹಸ್ರನಾಮಪಠನ, ವಿಷ್ಣುಪೂಜೆ, ಕಪಿಲಾಗೋಸೇವೆ(ಗೋಗ್ರಾಸ ಕೊಡುವುದು), ಅಶ್ವತ್ಥಸೇವೆ(ಪ್ರದಕ್ಷಿಣೆ), ಏಕಾದಶೀವ್ರತ ಇವುಗಳೆಲ್ಲ ಕಲಿಯುಗದಲ್ಲಿ ಶ್ರೇಷ್ಠಧರ್ಮ. ಈ ಆರು ಅಲ್ಲದೇ ಏಳನೆಯದ್ದು ಬೇರೆ ಇಲ್ಲ.

**ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ ।**
**ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥** –ಸ.ಸ್ಮೃ.

ಯಾವಾಗಲೂ ಶ್ರೀವಿಷ್ಣುಸ್ಮರಣೆ ಮಾಡಬೇಕೆಂಬುದು ವಿಧಿ. ವಿಷ್ಣುಸ್ಮರಣೆ ಮಾಡದಿರಬಾರದು ಎಂಬುದು ನಿಷೇಧ. ಲೋಕದಲ್ಲಿರುವ (ವೇದದಲ್ಲಿ) ಎಲ್ಲಾ ವಿಧಿನಿಷೇಧಗಳೂ ಈ ಎರಡು ವಿಧಿನಿಷೇಧಗಳ ಕಿಂಕರರು.

**ಆತ್ಮೈವ ಯದಿ ನಾತ್ಮಾನಂ ಅಹಿತೇಭ್ಯೋ ನಿವಾರಯೇತ್ ।**
**ಕೋಽನ್ಯೋ ಹಿತಕರಸ್ತಸ್ಮಾದಾತ್ಮಾನಂ ತಾರಯಿಷ್ಯತಿ ॥** –ಗ.ಪು.

ತನಗೆ ಬರತಕ್ಕ ಸಮಸ್ತ ದುಃಖಗಳನ್ನೂ ತಾನೇ ಪರಿಹರಿಸಿಕೊಳ್ಳದಿದ್ದರೆ ತನ್ನ ಉದ್ಧಾರ ಮಾಡತಕ್ಕವನು. ತನ್ನಿಂದಲೂ ಹಿತಕರವಾದವನು ಬೇರೆ ಯಾರಿದ್ದಾರೆ?

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥** –ಭ.ಗೀ.

ಪರಮಾತ್ಮನ ಅನುಗ್ರಹದಿಂದ ಜೀವನನ್ನು ಸಂಸಾರದುಃಖದಿಂದ ಉದ್ಧಾರ ಮಾಡಬೇಕು. ಸಜ್ಜನರಿಗೆ ಭಗವಂತನೇ ಬಂಧು. ದುರ್ಜನರಿಗೆ ಭಗವಂತನೇ ಶತ್ರು.

**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ॥**

ಮನುಷ್ಯರಿಗೆ ಸಂಸಾರಬಂಧನಕ್ಕೂ, ಅದರಿಂದ ಮೋಕ್ಷಕ್ಕೂ ಮನಸ್ಸೇ ಕಾರಣ.

**ಉದ್ಧರೇನ್ಮನಸಾ ಜೀವಂ ನ ಜೀವಮವಸಾದಯೇತ್ ।**
**ಜೀವಸ್ಯ ಬಂಧುಃ ಶತ್ರುಶ್ಚ ಮನ ಏವ ನ ಸಂಶಯಃ ॥** –ಗೀ.ಭಾ.

ಮನಸ್ಸಿನ ಹತೋಟಿಯಿಂದ ಜೀವನನ್ನು ಉದ್ಧರಿಸಬೇಕು. ಅದಲ್ಲದೆ ಜೀವನನ್ನು ಅಧೋಗತಿಗಿಳಿಸಬಾರದು. ಯಾರು ಜೀವನ ಬುದ್ಧಿಬಲದಿಂದ ಮನಸ್ಸನ್ನು ನಿಗ್ರಹಿಸಿ ಪರಮಾತ್ಮನನ್ನು ಹೊಂದುತ್ತಾನೋ ಆಗ ತನಗೆ ತಾನೇ ಬಂಧು. ಯಾರು ಹೀಗೆ ಮಾಡುವುದಿಲ್ಲವೋ ಆಗ ತನಗೆ ತಾನೇ ಶತ್ರುವಾಗುತ್ತಾನೆ.

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ॥** –ಭ.ಗೀ.

**ಜಿತಾತ್ಮಾ ಹಿ ಪ್ರಶಾಂತೋ ಭವತಿ । ನ ತಸ್ಯ ಮನಃ ಪ್ರಾಯೋ ವಿಷಯೇಷು ಗಚ್ಛತಿ । ತದಾ ಪರಮಾತ್ಮಾ ಸಮ್ಯಕ್ ಹೃದ್ಯಾಹಿತಃ । ಸನ್ನಿಹಿತೋ ಭವತಿ । ಅಪರೋಕ್ಷಜ್ಞಾನೀ ಭವತೀತ್ಯರ್ಥಃ ॥** –ಗೀ.ಭಾ.

ಭಕ್ತಿಯಿಂದ ಭಗವಂತನನ್ನು ಗೆದ್ದವನು, ವಿಷಯದತ್ತ ಸುಳಿಯದೆ, ಮನಸ್ಸನ್ನು ಭಗವಂತನಲ್ಲೇ ಇಟ್ಟವನಲ್ಲಿ ಭಗವಂತ ನೆಲೆಸುತ್ತಾನೆ. ಅಪರೋಕ್ಷಜ್ಞಾನಿಯೂ ಆಗುತ್ತಾನೆ.

**ಜಾತೀಶತೇಷು ಲಭತೇ ಭುವಿ ಮಾನವತ್ವಂ ತತ್ರಾಪಿ ದುರ್ಲಭತರಂ ಖಲು ಭೋ ದ್ವಿಜತ್ವಮ್ ।**
**ಯಸ್ತನ್ನ ಪಾಲಯತಿ ಲಾಲಯತೀಂದ್ರಿಯಾಣಿ ತಸ್ಯಾಮೃತಂ ಕ್ಷರತಿ ಹಸ್ತಗತಂ ಪ್ರಮಾದಾತ್ ॥** –ಗ.ಪು.

ಪ್ರಪಂಚದಲ್ಲಿ ಸ್ಥಾವರ, ಜಂಗಮವೆಂಬ ನಾನಾ ಪ್ರಭೇದಗಳಿವೆ. ಅದರಲ್ಲಿ ಈ ಜೀವಿಯು ಸಾವಿರಾರು ಮರಬಳ್ಳಿಗಳಾಗಿ ಹುಟ್ಟಿ ಬಹುಕಾಲ ಕಳೆದು; ಆಮೇಲೆ ಪಕ್ಷಿ, ಸರ್ಪ ಮೊದಲಾದ ಜನ್ಮಗಳಲ್ಲಿ ಕಷ್ಟಪಟ್ಟು; ಅನಂತರ ಹುಲಿ, ಜಿಂಕೆ, ಆಡು, ತೋಳ ಮೊದಲಾದ ಮೃಗ-ಪಶುಜನ್ಮಗಳನ್ನು ತಾಳಿ; ಪರಾಧೀನವಾಗಿ ಬಾಳಿ; ಆಮೇಲೆ ಗೋವು, ಕುದುರೆ ಮುಂತಾದ ಜನ್ಮಗಳಲ್ಲಿಯೂ ಪರೋಪಕಾರಕ್ಕೋಸ್ಕರ ಕಷ್ಟವನ್ನನುಭವಿಸಿ ಆಮೇಲೆ ಕ್ರಮದಿಂದ ನೀಚ, ಸಂಕರ, ಶೂದ್ರ, ವೈಶ್ಯ, ಕ್ಷತ್ರಿಯ ಮೊದಲಾದ ಜನ್ಮಗಳಲ್ಲಿಯೂ ಪುಣ್ಯವಿಶೇಷಗಳನ್ನು ಸಂಪಾದನೆ ಮಾಡಲಿಕ್ಕಾಗದೆ; ಆಹಾರಾದಿಗಳಿಂದಲೇ ಜನ್ಮವನ್ನು ನೀಗಿ; ಪುನಃ ದೇವರ ಅನುಗ್ರಹದಿಂದ, ಪುಣ್ಯ ಲೇಶದಿಂದ, ಪುಣ್ಯದೇಶದಲ್ಲಿ, ಸತ್ಕುಲದಲ್ಲಿ, ಉತ್ಕೃಷ್ಟಕುಲದಲ್ಲಿ ಬ್ರಾಹ್ಮಣಜನ್ಮವನ್ನು ತಾಳಿ; ಮಹಾತ್ಮರ, ಸಜ್ಜನರ, ಒಳ್ಳೆಯ ಸ್ವಭಾವ ವಿಶಿಷ್ಟಸೌಕರ್ಯವಿರುವಾಗಲೂ ಜ್ಞಾನಪೂರ್ವಕವಾದ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾಡದೆ, ಮೋಕ್ಷಸಾಧನವನ್ನು ಸಂಪಾದಿಸದೆ ಇದ್ದರೆ ಪುನಃ ಹಿಂದಿನಂತೆ ಇಂದ್ರಿಯಗಳನ್ನೇ ವಿಷಯಭೋಗದಿಂದ ತೃಪ್ತಿಪಡಿಸಿದರೆ ಕೈಗೆ ಬಂದ ತುತ್ತು ಬಾಯಿಗೆ ಸಿಕ್ಕಲಿಲ್ಲ ಎಂಬಂತೆ ಕೈಗೆ ಸುಲಭವಾಗಿ ಸಿಕ್ಕಿರುವ ಅಮೃತವನ್ನು ಪ್ರಾಶನ ಮಾಡದೆ ಕೆಳಗೆ ಬಿಟ್ಟಂತೆ ಆಗುವುದು. ಇಷ್ಟು ಸೌಕರ್ಯವಿರುವ ಜನ್ಮ ಇನ್ನು ಯಾವಾಗ ಬರುವುದೋ ಗೊತ್ತಿಲ್ಲ. ಆದ್ದರಿಂದ ಈ ಜನ್ಮ ವ್ಯರ್ಥವಾಗಿ ಹೋಗುವುದು.

**ಆಹಾರನಿದ್ರಾಭಯಮೈಥುನಾನಿ ಸಾಮಾನ್ಯಮೇತತ್ ಪಶುಭಿರ್ನರಾಣಾಮ್ ।**
**ಏಕೋ ವಿವೇಕೋ ಹ್ಯಧಿಕೋ ಮನುಷ್ಯೇ ತೇನೈವ ಹೀನಃ ಪಶುಭಿಃ ಸಮಾನಃ ॥** –ನೀ.ಶಾ.

ಮನುಷ್ಯರಿಗೆ ಮತ್ತು ಪಶುಗಳಿಗೆ ಆಹಾರ, ನಿದ್ರೆ, ಭಯ, ಮೈಥುನಗಳೆಂಬ ನಾಲ್ಕು ಧರ್ಮಗಳು ಸಮಾನವಾಗಿವೆ. ಮನುಷ್ಯನಿಗೆ ಪಶುಗಳಿಗಿಲ್ಲದ ವಿವೇಕ ಒಂದು ಜಾಸ್ತಿ ಇದೆ. ಈ ಮೇಲೆ ಹೇಳಿದ ನಾಲ್ಕು ಧರ್ಮಗಳನ್ನು

ವಿವೇಕದಿಂದ ದೇಶ, ಕಾಲ, ಪಾತ್ರಗಳಿಗನುಗುಣವಾಗಿ ಆಚರಿಸಿದರೆ ಮನುಷ್ಯತ್ವ; ವಿವೇಕವಿಲ್ಲದೆ ಆಚರಿಸಿದರೆ ಪಶುತ್ವ. ಆಗ 'ಮನುಷ್ಯರೂಪೇಣ ಮೃಗಾಶ್ಚರಂತಿ' ಎಂದು ಹೇಳಬೇಕಾಗುತ್ತದೆ. ಇಂದ್ರಿಯಚಾಪಲ್ಯದಿಂದ ಭೋಗವನ್ನು ಎಷ್ಟು ವರ್ಷ ಅನುಭವಿಸಿದರೂ ತೃಪ್ತಿಯಾಗಲಾರದು.

**ನ ಜಾತು ಕಾಮಃ ಕಾಮಾನಾಮ್ ಉಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥** –ಭಾಗ. ೧೯-೧೯-೧೪

ಹವಿಸ್ಸು ಹಾಕಿದಷ್ಟೂ ಅಗ್ನಿಯ ಕೃಷ್ಣವರ್ಣದ ಕೆನ್ನಾಲಿಗೆಗಳು ಮುಗಿಲೆತ್ತರಕ್ಕೆ ಸಾಗುವಂತೆ, ಭೋಗದಿಂದ ಕಾಮನೆಗಳೆಂಬ ಕರಿನಾಗಗಳು ಹುಟ್ಟಿಕೊಳ್ಳುತ್ತವೆ. ಆತ್ಮನಿಗೆ ಮಾರಕವಾಗುತ್ತವೆ.

**ಜೀರ್ಯಂತಿ ಜೀರ್ಯತಃ ಕೇಶೋ ದಂತಾ ಜೀರ್ಯಂತಿ ಜೀರ್ಯತಃ ।**
**ಧನುಷಾ ಜೀವಿತಾಶಾ ಚ ಜೀರ್ಯತೋಽಪಿ ನ ಜೀರ್ಯತಃ ॥**

ಮುದುಕನಾದವನ ತಲೆ ಹಣ್ಣಾಗುತ್ತದೆ. ಹಲ್ಲುಗಳು ಉದುರುತ್ತವೆ. ಧನದ ಆಸೆ, ಜೀವಿಸದೇಕೆಂಬ ಆಸೆಗಳು ಮಾತ್ರ ನೀಗುವುದೇ ಇಲ್ಲ.

ಭೋಗದಿಂದ ಬಯಕೆ ನೀಗದು. ಜ್ಞಾನವನ್ನೂ ಮುಚ್ಚುವ ಶತ್ರು ಕಾಮ.

**ಬ್ರಾಹ್ಮಣಸ್ಯ ಚ ದೇಹೋಽಯಂ ಕ್ಷುದ್ರ ಕಾಮಾಯ ನೇಷ್ಯತೇ ।**
**ಕೃಚ್ಛ್ರಾಯ ತಪಸೇ ಚೈವ ಪ್ರೇತ್ಯಾನಂತಸುಖಾಯ ಚ ॥** –ಗ.ಪು.

ಬ್ರಾಹ್ಮಣನ ದೇಹವು ದುಷ್ಟಕಾಮನೆಗಳಿಗೆ ಹೇಳಿದ್ದಲ್ಲ. ಕಷ್ಟಪಟ್ಟು ವ್ರತೋಪಾಸನ, ತಪಸ್ಸುಗಳನ್ನು ಮಾಡಿ ಮುಂದೆ ಭಕ್ತಿಯಿಂದ ಪರಮಾತ್ಮನನ್ನು ಒಲಿಸಿ, ಅವನ ಅನುಗ್ರಹದಿಂದ ಮೋಕ್ಷದ ಅನಂತಸುಖ ಪಡೆಯಲಿಕ್ಕಾಗಿರುವುದು.

## ಭಕ್ತಿ

**ಭಕ್ತಿರ್ನಾಮಮಾಹಾತ್ಮ್ಯಜ್ಞಾನಪೂರ್ವಕಃ, ಸ್ವಾತ್ಮಾತ್ಮೀಯಸಮಸ್ತವಸ್ತುಭ್ಯೋಽಪ್ಯಧಿಕಃ ಅಂತರಾಯಸಹಸ್ರೇಣಾಪ್ಯಪ್ರತಿಬದ್ಧಃ, ನಿರಂತರಪ್ರೇಮಪ್ರವಾಹ ।** –ಸುಧಾ

ಮಾಹಾತ್ಮ್ಯಜ್ಞಾನಪೂರ್ವಕ, ತನ್ನ-ತನ್ನವರಾದ ಮಿತ್ರ, ಧನ, ಪುತ್ರ, ಕಳತ್ರಾದಿಗಳಲ್ಲಿರುವ ಪ್ರೀತಿಗಿಂತ ಅತ್ಯಧಿಕವಾದ, ಸಾವಿರಾರು ತೊಡಕುಗಳು ಬಂದಾಗಲೂ ನಿಲ್ಲದ, ನಿರಂತರ ಪ್ರೇಮಪ್ರವಾಹಕ್ಕೆ ಭಕ್ತಿ ಎಂದು ಹೆಸರು.

**ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ ॥** –ಭಾ.ತಾ.ನಿ.

ಮಾಹಾತ್ಮ್ಯಜ್ಞಾನಪೂರ್ವಕ ದೃಢವಾದ, ತನ್ನ ಹಾಗೂ ತನಗೆ ಬೇಕಾದವರೆಲ್ಲರ ಮೇಲಿರುವ ಪ್ರೀತಿಗಿಂತಲೂ ಅಧಿಕವಾದ ಸ್ನೇಹಕ್ಕೆ(ಪ್ರೀತಿಗೆ) ಭಕ್ತಿ ಎಂದು ಹೆಸರು. ಇದರಿಂದಲೇ ಮುಕ್ತಿ ಆಗುವುದಲ್ಲದೆ, ಬೇರೆ ಯಾವುದರಿಂದಲೂ ಮುಕ್ತಿಯಾಗುವುದಿಲ್ಲ.

**ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ ।**
**ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ॥** –ಭಾ.ತಾ.ನಿ.

ದಾನ, ತೀರ್ಥಸ್ನಾನ, ತಪಸ್ಸು, ಯಜ್ಞ ಮೊದಲಾದ ಕರ್ಮಗಳು ಶ್ರೀಹರಿಸೇವೆಯ ಅಂಗಗಳು. ಇದರಿಂದ

**ಅಂತಃಕರಣಶುದ್ಧಿಯಾಗಿ ಭಕ್ತಿ ಬರಲು ಕಾರಣವಾಗುತ್ತದೆ. ಮುಕ್ತಿಯಾಗಬೇಕಾದರೆ ಅತಿಶಯವಾದ ಭಕ್ತಿಯೇ ಕಾರಣ.**

**ಭಕ್ತ್ಯರ್ಥಾನ್ಯಖಿಲಾನ್ಯೇವ ಭಕ್ತಿರ್ಮೋಕ್ಷಾಯ ಕೇವಲಾ ।** –ಧಾ.ತಾ.ನಿ.

ಎಲ್ಲಾ ಕರ್ಮಗಳನ್ನು ಭಕ್ತಿ ಬರಲಿಕ್ಕಾಗಿ ಮಾಡಬೇಕಾಗಿದ್ದು, ಕೇವಲ ಭಕ್ತಿ ಯೊಂದೇ ಮೋಕ್ಷಸಾಧನ.

**ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್ ।** –ಧಾ.ತಾ.ನಿ.

ಶ್ರೀವಿಷ್ಣುವು ಭಕ್ತಿಯಿಂದಲೇ ಸಂತುಷ್ಟನಾಗುವುದಲ್ಲದೆ ಬೇರೆ ಯಾವುದರಿಂದಲೂ ಅಲ್ಲ.

**ಪರಮಸ್ನೇಹಸಂಯುಕ್ತಯಥಾರ್ಥಜ್ಞಾನಕೋ ಭವೇತ್ ।**
**ಸಾ ಭಕ್ತಿರಿತಿ ವಿಜ್ಞೇಯಾ ಸಾಧನಂ ಭೋಗಮೋಕ್ಷಯೋಃ ॥** –ತ.ಸಂ.

ಭಗವಂತನಲ್ಲಿ ಪರಮಸ್ನೇಹ ಇಟ್ಟು, ಭಗವಂತನ ಯಥಾರ್ಥಜ್ಞಾನವನ್ನು ಸಂಪಾದಿಸಿಕೊಂಡು, ಅದರ ಹಿನ್ನೆಲೆಯಿಂದ ಸಾಧಿತವಾಗಿರಬೇಕು. ಈ ಯಥಾರ್ಥ ಜ್ಞಾನಪೂರ್ವಕವಾದ ಸ್ನೇಹವನ್ನೇ ಭಕ್ತಿಯೆಂದು ಹೇಳುವುದು. ಈ ಭಕ್ತಿಯೊಂದೇ ಮೋಕ್ಷಕ್ಕೂ ಅಲ್ಲಿನ ಸುಖವಿಶೇಷಭೋಗಕ್ಕೂ ಸಾಧನವಾಗಿದೆ.

**ಮುಖ್ಯಮೇಷೈವ ನಾನ್ಯತ್ ಸ್ಯಾತ್ ಸರ್ವಂ ವ್ಯರ್ಥಂ ತಯಾ ವಿನಾ ।**
**ಸೈಕಾऽಪ್ಯಧೀಷ್ಟಫಲದಾ ಮೋಕ್ಷೋ ದರ್ಶನಯುಕ್ತಯಾ ॥** –ತಂ.ಸ.

ಎಲ್ಲ ಸಾಧನೆಗಳಲ್ಲಿಯೂ ಈ ಭಕ್ತಿಯೇ ಮುಖ್ಯಸಾಧನ. ಭಕ್ತಿಯೊಂದಿಲ್ಲದಿದ್ದರೆ ಮಿಕ್ಕದ್ದು ಏನಿದ್ದರೇನು ಬಂತು. ಎಲ್ಲವೂ ನಿಷ್ಫಲ. ಏನಿಲ್ಲದಿದ್ದರೂ ಭಕ್ತಿಯಿಂದಲೇ ಮೋಕ್ಷ ಕೂಡ ಲಭ್ಯವಾಗುವುದು.

**ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಮೇವಂವಿಧೋऽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥** –ಭ.ಗೀ.

ನನ್ನನ್ನು ಈ ಪರಿಯಾಗಿ ತಿಳಿಯಲು, ತಿಳಿದು ಕಾಣಲು, ಕಂಡು ಸೇರಲು ನನ್ನಲ್ಲೇ ನೆಲೆಗೊಂಡ ಭಕ್ತಿಯಿಂದ ಮಾತ್ರವೇ ಸಾಧ್ಯ. ಆದ್ದರಿಂದಲೇ ಶ್ರೀಕೃಷ್ಣ ಹೇಳಿದ್ದು– 'ನ ಮೇ ಭಕ್ತಃ ಪ್ರಣಶ್ಯತಿ' (ಭ.ಗೀ.) –ನನ್ನ ಭಕ್ತನು ಯಾವಾಗಲೂ ನಾಶ ಹೊಂದುವುದಿಲ್ಲ.

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥** –ಭ.ಗೀ.

ಇದು ಮೂರು ಆತ್ಮನ ನಾಶದ ದಾರಿ, ನರಕದ ಬಾಗಿಲು– ಕಾಮ, ಕ್ರೋಧ ಮತ್ತು ಲೋಭ. ಆದ್ದರಿಂದ ಈ ಮೂರನ್ನೂ ಬಿಡಬೇಕು.

**ಕ್ಷಮಾ ಸತ್ಯಂ ದಯಾ ದಾನಂ ಶೌಚಮಿಂದ್ರಿಯನಿಗ್ರಹಃ ।**
**ದೇವಪೂಜಾऽಗ್ನಿಹವನಂ ಸಂತೋಷಃ ಸ್ತೇಯವರ್ಜನಮ್ ।**
**ಸರ್ವವ್ರತೇಷ್ವಯಂ ಧರ್ಮಃ ಸಾಮಾನ್ಯೋऽಥ ಶತಧಾ ಸ್ಮೃತಾಃ ॥** –ಸ್ಮೃತಿ

ಸಹನೆ, ಸತ್ಯಮಾತು, ಪ್ರಾಣಿದಯ, ತ್ಯಾಗ, ಶುದ್ಧಿ, ಇಂದ್ರಿಯನಿಗ್ರಹ, ದೇವರ ಪೂಜೆ, ಅಗ್ನಿಹವನ, ಸಂತೋಷ, ನಿರ್ವಂಚನೆ –ಹೀಗೆ ಹತ್ತು ಗುಣಗಳ ಅನುಷ್ಠಾನವು ಎಲ್ಲಾ ವ್ರತಗಳಲ್ಲಿಯೂ ಅನುಸರಣೆ ಮಾಡುವುದಲ್ಲದೆ, ತನ್ನ ದೈನಂದಿನ ಜೀವನದಲ್ಲೂ ಇದನ್ನು ಅಳವಡಿಸಿಕೊಂಡು ನಡೆಯುವುದು ಬಹುಮುಖ್ಯವಾಗಿದೆ.

## ದೇವಿಯ ಉಪಾಸಕರಿಗೆ ಎಚ್ಚರಿಕೆ

**ಅವಿಷ್ಣುಜ್ಞೈರತದುಪಾಸಾವಿವರ್ಜಿತೈಃ ।**
**ಶಪೇದುಪಾಸಿತಾಽಪ್ಯೇಷಾ ಶ್ರೀಸ್ತಾನ್ ತದ್ಧರಿತತ್ವವಿತ್ ।**
**ತದ್ಭಕ್ತಃ ತದುಪಾಸ್ಯೈವ ಶ್ರಿಯಂ ಧ್ಯಾಯೇತ ನಿತ್ಯದಾ ॥** –ಪರಮಶ್ರುತಿ, ಗೀ.ತಾ.

ಲಕ್ಷ್ಮೀದೇವಿ ಕಡುಪತಿವ್ರತೆ. ಆದ್ದರಿಂದ ತನ್ನ ಪ್ರಿಯತಮನಾದ ಶ್ರೀವಿಷ್ಣುವನ್ನು ಚೆನ್ನಾಗಿ ತಿಳಿಯದೆ, ಅವನ ಭಕ್ತನಾಗದೆ, ಅವನ ಉಪಾಸಕನಾಗದೆ ತನ್ನನ್ನು ಮಾತ್ರ ಉಪಾಸನೆ ಮಾಡುವವರ ಬಗ್ಗೆ ಅವಳು ಪ್ರಸನ್ನಳಾಗುವ ಬದಲು ಅಸಮಾಧಾನಕ್ಕೊಳಗಾಗಿ ಅಂತಹವರನ್ನು ಶಪಿಸುವಳು. ಆದ್ದರಿಂದ ಶ್ರೀಹರಿತತ್ವವನ್ನು ಸರಿಯಾಗಿ ತಿಳಿದು, ಅವನಲ್ಲಿ ಭಕ್ತಿಯನ್ನೂ, ಅವನ ಉಪಾಸನೆಯನ್ನೂ ನಡೆಸಿದ ಅನಂತರವಷ್ಟೇ ಶ್ರೀದೇವಿಯನ್ನು ಧ್ಯಾನಿಸಬೇಕು.

ದೇವಿಯ ಉಪಾಸಕರಿಗೆ ನೀಡಿರುವ ಕಟ್ಟಪ್ಪಣೆ ಇದು. ದೇವಿಯ ಉಪಾಸನೆ ಎಷ್ಟು ವ್ಯಾಪಕವಾಗಿದೆಯೋ ಅಷ್ಟೇ ವ್ಯಾಪಕವಾಗಿ ಅದರಲ್ಲಿ ಅಸದುಪಾಸನೆಯ ಅಂಶಗಳೂ ಬೆರೆತುಕೊಂಡಿವೆ. ಅಂತಹವುಗಳಲ್ಲಿ ಪ್ರಮುಖವಾದ ಒಂದಂಶವೆಂದರೆ, ಶ್ರೀದೇವಿಗೆ ಅತ್ಯಂತಪ್ರಿಯನಾದ ಶ್ರೀಹರಿಯ ತಪ್ಪು ತಿಳುವಳಿಕೆ, ಅವಗಣನೆ, ಅನ್ಯಥಾ ಭಾವನೆ. ಈ ಬಗೆಯ ಅಪಚಾರದೊಂದಿಗೆ ನಡೆಸಲಾಗುವ ಶ್ರೀಚಕ್ರಪೂಜೆ, ದುರ್ಗಾನಮಸ್ಕಾರ, ಚಂಡಿಕಾಹೋಮ, ತ್ರಿಕಾಲಪೂಜೆ ಮುಂತಾದವುಗಳಿಂದ ಐಹಿಕಸಮೃದ್ಧಿ ಸಿದ್ಧಿಸುವಂತೆ ಕಂಡುಬರಬಹುದು. ಆದರೆ ಪ್ರಾರಬ್ಧಕರ್ಮದ ಪರಿಪಾಕದ ಫಲವಾಗಿಯೇ ಸಿದ್ಧಿಸುವ ಇದಕ್ಕೂ ದೇವಿಯ ಅಸದುಪಾಸನೆಗೂ ಕಾಕತಾಳೀಯ ಸಂಬಂಧವಷ್ಟೇ! ದೇವಿಯ ಉಪಾಸನೆಯಿಂದಲೇ ಸಿದ್ಧಿಸಿದ್ದೆನ್ನುವುದಾದರೂ, ಪ್ರಸನ್ನಳಾದ ಆಕೆಯಿಂದ ಅದು ಅನುಗೃಹೀತವಾಗಿರದೆ, ತನ್ನ ಕುರಿತು ಸದುಪಾಸನೆಗೆ ಅನರ್ಹನಾದ ಆ ವ್ಯಕ್ತಿಯ ಅಸದುಪಾಸನೆಯ ಅನ್ಯಥಾಜ್ಞಾನ, ದುರಾಗ್ರಹ ಇನ್ನಷ್ಟು ದೃಢಗೊಳ್ಳಲೆಂಬ ನಿಗ್ರಹದೃಷ್ಟಿಯಿಂದ ನೀಡಲ್ಪಟ್ಟದ್ದಾಗಿರುತ್ತದಷ್ಟೆ! ಆದ್ದರಿಂದ ಸಾತ್ವಿಕಸಾಧಕನು ಆಪಾತತಃ ರಮಣೀಯವಾದ, ಇಂತಹ ಐಹಿಕ ಸಮೃದ್ಧಿಗೆ ಮರುಳಾಗಿ ದೇವಿಯ ಅಸದುಪಾಸನೆಯಲ್ಲಿ ತೊಡಗಬಾರದು. (ಶ್ರೀತತ್ವಪ್ರದೀಪಗ್ರಂಥದಿಂದ ಆಯ್ದದ್ದು.)

### ಹರಿಸ್ಮರಣೆ

**ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ ॥** –ದ್ವಾ.ಸ್ತೋ.

ಯಾವಾಗಲೂ ಹರಿಸ್ಮರಣೆ ಮಾಡಬೇಕು. ವಿಶೇಷವಾಗಿ ಮನುಷ್ಯನು ತನ್ನ ಅಂತ್ಯಕಾಲದಲ್ಲಿ ಅವಶ್ಯ ಮಾಡತಕ್ಕದ್ದು. ಯಾವಾಗಲೂ ಮಾಡುತ್ತಾ ಇದ್ದರೆ ತಾನೆ ಅಭ್ಯಾಸಬಲದಿಂದ ಅಂತ್ಯಕಾಲದಲ್ಲಿ ಮಾಡುವಂತಾಗುವುದು.

**ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।**
**ದ್ವಾಪರೇ ಯಜ್ಞಮೇವಾಹುರ್ದಾನಮೇವ ಕಲೌ ಯುಗೇ ॥** –ಸ್ಮೃ.ರ.

ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಜ್ಞಾನ, ದ್ವಾಪರಯುಗದಲ್ಲಿ ಯಜ್ಞ ಮತ್ತು ಕಲಿಯುಗದಲ್ಲಿ ದಾನ ಶ್ರೇಷ್ಠ.

**ಧ್ಯಾಯತೇ ಕೃತೇ, ಯಜನ್ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್ ।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥** –ವಸಿಷ್ಠಸ್ಮೃತಿ

ಕೃತಯುಗದಲ್ಲಿ ತಪಸ್ಸಿನಿಂದ, ತ್ರೇತಾಯುಗದಲ್ಲಿ ಯಜ್ಞದಿಂದ, ದ್ವಾಪರಯುಗದಲ್ಲಿ ಅರ್ಚನ–ಪೂಜೆಯಿಂದ ಏನು ಫಲ ಬರುವುದೋ ಕಲಿಯುಗದಲ್ಲಿ ಹರಿ ಸಂಕೀರ್ತನೆಯಿಂದ ಎಲ್ಲಾ ಫಲ ಬರುವುದು.

**ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕಗುಣೋ ಮಹಾನ್ ।**
**ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂ ವ್ರಜೇತ್ ॥** –ವಿಷ್ಣುಧರ್ಮೋತ್ತರ

ಹೇ ರಾಜನ್, ದೋಷದುಷ್ಟವಾದ ಕಲಿಯುಗದಲ್ಲಿ ಮಹಾಗುಣ ಒಂದಿದೆ. ಶ್ರೀಕೃಷ್ಣನನ್ನು ಭಕ್ತಿಯಿಂದ ಸಂಕೀರ್ತನೆ(ಭಜನೆ) ಮಾಡುವುದರಿಂದ ಸಂಸಾರ ಬಂಧನದಿಂದ ಮುಕ್ತಿಯನ್ನು ಹೊಂದುತ್ತಾನೆ.

**ಕೃಷ್ಣವರ್ಣಂ ಕಲೌ ಕೃಷ್ಣಂ ಸಾಂಗೋಪಾಂಗಂ ಸಪಾರ್ಷದಮ್ ।**
**ಯಜ್ಞೈಃ ಸಂಕೀರ್ತನಪ್ರಾಯೈಃ ಯಜಂತೀಹ ಸುಮೇಧಸಃ ॥** –ಭಾಗ.

ಜ್ಞಾನಿಗಳು ಕಲಿಯುಗದಲ್ಲಿ ಕೃಷ್ಣವರ್ಣವುಳ್ಳ ಪರಿವಾರಸಹಿತನಾದ ಶ್ರೀಕೃಷ್ಣನನ್ನು ಸಂಕೀರ್ತನರೂಪವಾದ ಯಜ್ಞದಿಂದ ಪೂಜಿಸುತ್ತಾರೆ.

**ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।**
**ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥**

ಇದು ಕಲಿಸಂತರಣೋಪನಿಷತ್. ಬ್ರಹ್ಮದೇವರು ನಾರದರಿಗೆ ಉಪದೇಶ ಮಾಡಿದ್ದು. ಒಂದಾವರ್ತಿ ಈ ಶ್ಲೋಕ ಹೇಳಿದಾಗ ೧೬ ಹರಿಸ್ಮರಣೆ ಆಗುತ್ತದೆ. ಇದನ್ನು ಎಲ್ಲರೂ ಯಾವಾಗಲೂ ಹೇಳಬಹುದು.

**ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ತೀರ್ಥೇಷು ವ್ರತೇಷು ಚೈವ ।**
**ಇಷ್ಟೇಽನುಪೂರ್ತೇಷು ಚ ಯತ್ಪ್ರದಿಷ್ಟಂ ಪುಂಸಾಂ ಸ್ಮೃತೇ ತತ್ಖಲು ವಾಸುದೇವೇ ॥** –ಕೃ.ಮ.

ವೇದಾಧ್ಯಯನ, ಯಜ್ಞ, ದಾನ, ತಪಸ್ಸು, ತೀರ್ಥಯಾತ್ರೆ, ವ್ರತಾಚರಣೆ, ಇಷ್ಟಾ ಪೂರ್ತ ಮುಂತಾದ ಇವೆಲ್ಲವುಗಳ ಫಲವನ್ನು ಹರಿಸ್ಮರಣೆಯೊಂದೇ ಕೊಡಬಲ್ಲದು.

**ಆರ್ತಾ ವಿಷಣ್ಣಾಃ ಶಿಥಿಲಾಶ್ಚ ಭೀತಾಃ ಘೋರೇಷು ಚ ವ್ಯಾಧಿಷು ವರ್ತಮಾನಾಃ ।**
**ಸಂಕೀರ್ತ್ಯ ನಾರಾಯಣಶಬ್ದಮಾತ್ರಂ ವಿಮುಕ್ತದುಃಖಾಃ ಸುಖಿನೋ ಭವಂತಿ ॥** –ಕೃ.ಮ.

ಭಯವೋ, ರೋಗವೋ, ದುಃಖವೋ, ಇನ್ನೇನಾದರೂ ಪೀಡೆಯೋ ಏನಿದ್ದರೂ ನಾರಾಯಣಶಬ್ದಸ್ಮರಣ ಮಾತ್ರದಿಂದ ಕಷ್ಟಗಳೆಲ್ಲವೂ ಪರಿಹಾರವಾಗಿ ಸುಖಿಗಳಾಗುವರು.

**ನಾರಾಯಣೇತಿಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।**
**ತಥಾಽಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥** –ಕೃ.ಮ.

ನಾವು ಹೇಳಿದಂತೆ ನುಡಿವ ಬಾಯಿ ಇದೆ, ಜಪಿಸಲು ನಾರಾಯಣನಾಮವಿದೆ. ಹೀಗಿದ್ದರೂ ಜನರು ನರಕದಲ್ಲಿ ತೊಳಲುವರಲ್ಲಾ. ಇದು ಆಶ್ಚರ್ಯ~

**ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।**
**ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥** –ಕೃ.ಮ.

ಎಲ್ಲ ಶಾಸ್ತ್ರಗಳಲ್ಲಿ ಕೂಲಂಕಷವಾಗಿ ವಿಚಾರಿಸಿದಾಗ ತಿಳಿದುಬರುವ ಮಥಿತಾರ್ಥವಿಷ್ಟೇ – ಎಂದೆಂದೂ ಶ್ರೀಹರಿಯನ್ನು ಧ್ಯಾನಿಸಬೇಕು.

**ಯೇ ಸ್ಮರಂತಿ ಸದಾ ವಿಷ್ಣುಂ ವಿಶುದ್ಧೇನಾಂತರಾತ್ಮನಾ ।**
**ತೇ ಪ್ರಯಾಂತಿ ಭವಂ ತ್ಯಕ್ತ್ವಾ ವಿಷ್ಣುಲೋಕಮನಾಮಯಮ್ ॥** –ಕೃ.ಮ.

ತಿಳಿಯಾದ ಮನಸ್ಸಿನಿಂದ ಭಕ್ತಿಯಿಂದ ಶ್ರೀಹರಿಯನ್ನು ನೆನೆವ ಜನರು ಸಂಸಾರಭಯವನ್ನು ತೊಡೆದುಕೊಂಡು ವಿಷ್ಣುಸಾಲೋಕ್ಯವನ್ನು ಪಡೆಯುತ್ತಾರೆ.

**ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ।**
**ಅನಿಚ್ಛಯಾಽಪಿ ಸಂಸ್ಪೃಷ್ಟಃ ದಹತ್ಯೇವ ಹಿ ಪಾವಕಃ ॥** –ಗ.ಪು.

ಗೊತ್ತಿಲ್ಲದೆ ಬೆಂಕಿ ತಗುಲಿದರೂ ಕೂಡ ಬೆಂಕಿಯು ಹೇಗೆ ಸುಡುತ್ತದೋ ಹಾಗೆ ದುಷ್ಟಮನಸ್ಸುಳ್ಳವರೂ ಕೂಡ ಹರಿಯನ್ನು ಸ್ಮರಿಸಿದರೆ ಎಲ್ಲಾ ಪಾಪಗಳೂ ಪರಿಹಾರವಾಗುವವು.

**ಹರೇರ್ನಾಮ್ನಶ್ಚ ಯಾ ಶಕ್ತಿಃ ಪಾಪನಿರ್ಹರಣೇ ದ್ವಿಜ ।**
**ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥** –ಗ.ಪು.

ಹೇ ಗರುಡ, ಹರಿನಾಮಕ್ಕೆ ಪಾಪವನ್ನು ಸುಡುವ ಶಕ್ತಿ ಎಷ್ಟಿದೆಯೋ ಅಷ್ಟು ಪಾಪವನ್ನು ಮಾಡಲು ಪಾಪಿಯೂ ಸಮರ್ಥನಿಲ್ಲ.

**ಕೃಷ್ಣೇತಿ ಮಂಗಲಂ ನಾಮ ಯಸ್ಯ ವಾಚಿ ಪ್ರವರ್ತತೇ ।**
**ತಸ್ಯ ಭಸ್ಮೀಭವಂತ್ಯಾಶು ಮಹಾಪಾತಕಕೋಟಯಃ ॥** –ಭಾ.ಗ.

ಯಾರ ಬಾಯಿಯಲ್ಲಿ ಮಂಗಲವಾದ ಕೃಷ್ಣ ಎಂಬ ನಾಮ ಹೊರಡುತ್ತದೆಯೋ ಅವನ ಕೋಟಿಮಹಾ ಪಾತಕಗಳೂ ಒಡನೆಯೇ ಸುಟ್ಟುಹೋಗುತ್ತವೆ.

**ಅಚ್ಯುತಾನಂತ ಗೋವಿಂದನಾಮೋಚ್ಚಾರಣಭೇಷಜಾತ್ ।**
**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥** –ಗಾ.ಬ್ರಹ್ಮಕಾಂಡ.

ಅಚ್ಯುತ, ಅನಂತ, ಗೋವಿಂದ ಎಂಬ ನಾಮತ್ರಯವನ್ನು ಹೇಳುವ ಮದ್ದಿನಿಂದ ಸಕಲರೋಗಗಳೂ ಪರಿಹಾರವಾಗುತ್ತವೆ. ಇದು ಸತ್ಯ ಸತ್ಯ.

**ಅಚ್ಯುತೇತಿ ಮನಃಪೂತಂ ಅನಂತೇತಿ ಚ ವಾಕ್ಪುನಃ ।**
**ಗೋವಿಂದೇತಿ ತನುಃ ಪೂತಾ ತ್ವಜ್ಞಾತಜ್ಞಾತಪಾತಕೈಃ ॥** –ಸ್ಮೃ.ರ.

ಮನುಷ್ಯರು ತ್ರಿಕರಣದಿಂದ ಪಾಪ ಮಾಡುವುದು. ಅಚ್ಯುತ ಎಂದಾಗ ಮನಸ್ಸಿನಲ್ಲಿ ಮಾಡಿದ ಪಾಪವೂ, ಅನಂತ ಎಂದಾಗ ಮಾತಿನಲ್ಲಿ ಮಾಡಿದ ಪಾಪವೂ, ಗೋವಿಂದ ಎಂದಾಗ ಶರೀರದಿಂದ ಮಾಡಿದ ಪಾಪವೂ ತಿಳಿದೋ ಅಥವಾ ತಿಳಿಯದೆಯೋ ಮಾಡಿದ ಎಲ್ಲಾ ಪಾಪಗಳೂ ಪರಿಹಾರವಾಗುವವು.

**ತದ್ದಿನಂ ಸುದಿನಂ ಮನ್ಯೇ ಯದ್ದಿನೇ ಹರಿಸಂಸ್ಮೃತಿಃ ।**
**ತದೇವ ದುರ್ದಿನಂ ಮನ್ಯೇ ಯದ್ದಿನೇ ಹರಿವಿಸ್ಮೃತಿಃ ॥** –ಸಂಗ್ರಹ.

ಯಾವ ದಿನ ಹರಿಸ್ಮರಣೆಯಾಗುತ್ತದೆಯೋ ಆ ದಿನ ಸುದಿನ. ಯಾವ ದಿನ ಹರಿಸ್ಮರಣೆಯಾಗುವುದಿಲ್ಲವೋ ಆ ದಿನ ದುರ್ದಿನ.

### ಅಂತರ್ಯಾಮಿ ತತ್ತ್ವ

**ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ ।**
**ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥** –ತಂ.ಸಾ.ಸಂ.

ಆಯಾ ಮಂತ್ರಪ್ರತಿಪಾದ್ಯರಾದ ಎಲ್ಲಾ ದೇವತೆಗಳಲ್ಲೂ ಸನ್ನಿಹಿತನಾಗಿದ್ದುಕೊಂಡು ಆ ಎಲ್ಲಾ ದೇವತೆಗಳಿಗೂ ಫಲಪ್ರದಾನಶಕ್ತಿಯನ್ನು ಕರುಣಿಸಿ ಎಲ್ಲಾ ಕಾರ್ಯವನ್ನೂ ಸುವ್ಯವಸ್ಥಿತವಾಗಿ ನೆರವೇರಿಸುತ್ತಾ 'ಮಹಾಶಕ್ತಿ' ಎನಿಸಿಕೊಂಡವನು ಶ್ರೀಹರಿಯೊಬ್ಬನೇ.

**ಶಿವಾಂತರ್ಯಾಮಿತಾಂ ಸ್ವೀಯಾಂ ಸ್ವೀಯಾನ್ ಪ್ರತಿ ನಿಬೋಧಯನ್ ।**
**ದಯಾವಾರಿನಿಧಿಃ ಶೈವೀಂ ಶಿಲಾಮಾತ್ರಸ್ಥ ಶೋಭತೇ ॥** –ತೀರ್ಥಪ್ರಬಂಧ.

ಶ್ರೀ ವಾದಿರಾಜರು ನಿರೂಪಿಸಿರುವಂತೆ– ಮುಂದೆ ಅನಂತ(ಶೇಷ)ನ ಪದವಿಗೆ ಬರತಕ್ಕ ರುದ್ರದೇವರ ಲಿಂಗದಲ್ಲಿ ಅಂತರ್ಯಾಮಿಯಾಗಿರುವ ಮೂಲಕ ತಾನು ರುದ್ರಲಿಂಗದಲ್ಲಿ ಹೇಗೋ ಹಾಗೆ ಎಲ್ಲರಲ್ಲೂ ಅಂತರ್ಯಾಮಿಯಾಗಿರುವೆನೆಂಬುದನ್ನು ಸಾತ್ವಿಕರಿಗೆ ಸಂದೇಶಿಸುತ್ತಿರುವ ಉಡುಪಿಯ ಶ್ರೀಮದನಂತಾಸನಸ್ವಾಮಿ. ('ಅಂತರ್ಯಾಮಿತತ್ವ' ಪುಸ್ತಕದಿಂದ ಆಯ್ದದ್ದು).

**ಮಂತ್ರೇಷ್ವೇತೇಷು ಸರ್ವೇಷು ವಾಚ್ಯಸ್ತಾರೇಣ ಕೇಶವಃ ।**
**ಅಂತರ್ಯಾಮಿತಯಾ ಧ್ಯೇಯಃ ಸರ್ವದೇವೇಷು ಸರ್ವದಾ ॥** –ತಂ.ಸಾ.ಸಂ.

ಎಲ್ಲ ಮಂತ್ರಗಳಲ್ಲಿ ಉಚ್ಚರಿಸುವ ಓಂಕಾರದಿಂದ ಶ್ರೀಹರಿಯೊಬ್ಬನೇ ವಾಚ್ಯನಾಗಿದ್ದಾನೆ. ಪ್ರತಿಯೊಂದು ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ಶ್ರೀಹರಿಯೇ ಎಲ್ಲ ಮಂತ್ರಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದೇ ಧ್ಯಾನಿಸಬೇಕು.

**ಜಪಧ್ಯಾನಹುತಾರ್ಚಾದೀನ್ ಏವಂ ಯಃ ಕುರುತೇ ಸದಾ ।**
**ಧರ್ಮಾರ್ಥಕಾಮಮೋಕ್ಷಾಣಾಂ ಭಾಜನಂ ಸ್ಯಾತ್ ಸದೈವ ಹಿ ॥** –ತಂ.ಸಾ.ಸಂ.

ಯಾರು ಈ ರೀತಿಯಾಗಿ ಜಪ, ಹೋಮ, ಧ್ಯಾನ, ಪೂಜಾದಿಗಳನ್ನು ಮಾಡುವನೋ ಅವನೇ ಪುರುಷಾರ್ಥಚತುಷ್ಟಯಗಳಿಗೂ ಅರ್ಹನಾಗುತ್ತಾನೆ.

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ಸದಾ ।**
**ಗೃಹ್ಣಂತಿ ದೇವತಾ ನೈತಾಂ ತತಃ ಸ್ಯಾದ್ದೇಶವಿಪ್ಲವಃ ।**
**ವ್ಯಾಧಿಚೋರಾದಿಭಿಸ್ತಸ್ಮಾದಂತರ್ಧ್ಯೇಯೋ ಹರಿಃ ಸದಾ ॥** –ತಂ.ಸಾ.ಸಂ.

ವಿಷ್ಣುವಿನ ಸನ್ನಿಧಾನವನ್ನು ಸ್ಮರಿಸದೆ ಕ್ಷುದ್ರದೇವತೆಗಳನ್ನೇ ಪ್ರಧಾನವಾಗಿ ಪೂಜಿಸಿದರೆ ಅದನ್ನು ಯಾವ ದೇವತೆಗಳೂ ಸ್ವೀಕರಿಸುವುದಿಲ್ಲ. ಅದು ಕೇವಲ ಅಸುರರಿಗೆ ಮಾತ್ರ ತೃಪ್ತಿಯನ್ನೀಯಬಲ್ಲದು. ಇಂಥ ಆಸುರೀ ಪೂಜೆಯಿಂದ ವ್ಯಾಧಿ, ಕಳ್ಳರ ಪೀಡೆ, ಅನಾವೃಷ್ಟಿ ಮೊದಲಾದ ಪೀಡೆಗಳು ತುಂಬಿ ದೇಶ ವಿಪ್ಲವಗೊಂಡೀತು. ಆದ್ದರಿಂದ ಎಲ್ಲಾ ದೇವತೆಗಳಲ್ಲೂ ಅಂತರ್ಗತನಾದ ಶ್ರೀಹರಿಯನ್ನು ತಪ್ಪದೆ ಸ್ಮರಿಸಬೇಕು.

**ವಿಷ್ಣುಭಕ್ತಿವಿಹೀನಸ್ಯ ಗತಿಃ ಸ್ಯಾನ್ನಶುಭಾ ಕ್ವಚಿತ್ ।**
**ಭಕ್ತಸ್ಯಾನ್ಯದೇವೇಷು ತಸ್ಮಾದ್ಧ್ಯೇಯೋ ಹರಿಃ ಸದಾ ॥** –ತಂ.ಸಾ.ಸಂ.

ವಿಷ್ಣುಭಕ್ತಿಯಿಲ್ಲದ ಜನರು ಇತರ ದೇವತೆಗಳನ್ನು ಎಷ್ಟು ಭಜಿಸಿದರೂ, ಪೂಜಿಸಿದರೂ ಸದ್ಗತಿಯನ್ನು ಪಡೆಯಲಾರರು. ಆದ್ದರಿಂದ ಶ್ರೀಹರಿಯನ್ನೇ ಸದಾ ಧ್ಯಾನಿಸಬೇಕು.

**ಸರ್ವೋತ್ತಮಂ ಹರಿಂ ಧ್ಯಾತ್ವಾ ಯ ಏವಂ ಭಕ್ತಿಪೂರ್ವಕಮ್ ।**
**ಜಪಧ್ಯಾನಾದಿಭಿರ್ನಿತ್ಯಂ ಪೂಜಯೇನ್ನಾಸ್ಯ ದುರ್ಲಭಮ್ ॥** –ತಂ.ಸಾ.ಸಂ.

ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಭಕ್ತಿಪೂರ್ವಕವಾಗಿ ಆರಾಧಿಸುವ ಪುರುಷನಿಗೆ ದುರ್ಲಭವೆಂಬುದಿಲ್ಲ.

**ಭಕ್ತಿಂ ಕೃತ್ವಾಽನ್ಯದೇವೇಷು ಬ್ರಹ್ಮರುದ್ರಾದಿಕೇಷ್ವಪಿ ।**
**ಸರ್ವೋತ್ಕರ್ಷಮವಿಜ್ಞಾಯ ವಿಷ್ಣೋರ್ಯಾತಿ ತಮೋ ಧ್ರುವಮ್ ॥** –ತಂ.ಸಾ.ಸಂ.

ಶ್ರೀಹರಿ ಸರ್ವೋತ್ತಮನೆಂದರಿಯದೆ ಯಾವ ದೇವತೆಗಳನ್ನು ಭಜಿಸಿದರೂ ಅಂಧಂತಮಸ್ಸಿನಿಂದ ಪಾರಾಗುವಂತಿಲ್ಲ.

**ನ ಯಜ್ಞಾನಿ ಚ ತೀರ್ಥಾನಿ ನೋಪವಾಸವ್ರತಾನಿ ಚ ।**
**ದೈವತಾನಿ ಚ ಸರ್ವಾಣಿ ತ್ರಾತುಂ ತಂ ಶಕ್ನುಯುಃ ಕ್ವಚಿತ್ ॥** –ತಂ.ಸಾ.ಸಂ.

ಯಜ್ಞಗಳಾಗಲೀ, ಪುಣ್ಯತೀರ್ಥಗಳಾಗಲೀ, ವ್ರತೋಪವಾಸಾದಿಗಳಾಗಲೀ, ದೇವತೆಗಳಾಗಲೀ, ಏನೇ ಆಗಲಿ, ಯಾರೇ ಆಗಲಿ ವಿಷ್ಣುವಿಮುಖನಾದ ಜೀವನನ್ನು ರಕ್ಷಿಸಲಾರರು.

**ಹರಿರ್ಹಿ ಸರ್ವವೇದಾನಾಂ ಪರಮಃ ಪೂರ್ಣಶಕ್ತಿಮಾನ್ ।**
**ಸ್ವತಂತ್ರೋಽನ್ಯೇ ತದ್ವಶಾ ಹಿ ಸರ್ವತಃ ಸ ಜಗದ್ಗುರುಃ ॥** –ತಂ.ಸಾ.ಸಂ.

ಎಲ್ಲ ದೇವತೆಗಳಿಂದ ಶ್ರೇಷ್ಠನೂ, ಪೂರ್ಣಶಕ್ತಿಯೂ, ಸ್ವತಂತ್ರನೂ ಆದವನು ಶ್ರೀಹರಿಯೊಬ್ಬನೇ. ಉಳಿದವರೆಲ್ಲ ಅವನ ಅಡಿಯಾಳುಗಳು. ಆದ್ದರಿಂದಲೇ ಶ್ರೀಹರಿಯು ಜಗದ್ಗುರು ಎನಿಸಿದ್ದಾನೆ.

**ಬ್ರಹ್ಮಾದಯಶ್ಚ ತದ್ಭಕ್ತ್ಯಾ ಭಾಗಿನೋ ಭೋಗಮೋಕ್ಷಯೋಃ ।**
**ತಸ್ಮಾದ್ ಜ್ಞೇಯಶ್ಚ ಪೂಜ್ಯಶ್ಚ ವಂದ್ಯೋ ಧ್ಯೇಯಃ ಸದಾ ಹರಿಃ ॥** –ತಂ.ಸಾ.ಸಂ.

ಬ್ರಹ್ಮಾದಿಗಳೂ ಕೂಡ ಭಗವಂತನ ಆರಾಧನೆಯಿಂದಲೇ ಸುಖ-ಭೋಗವನ್ನು ಉಣ್ಣುತ್ತಿದ್ದಾರೆ, ಮೋಕ್ಷವನ್ನು ಪಡೆಯುತ್ತಾರೆ. ಆದ್ದರಿಂದ ಶ್ರೀಹರಿಯ ಮಹಿಮೆಯನ್ನು ತಿಳಿದುಕೊಳ್ಳಬೇಕು. ಶ್ರೀಹರಿಯನ್ನೇ ಎಂದೆಂದೂ ಪೂಜಿಸಬೇಕು. ವಂದಿಸಬೇಕು. ಧ್ಯಾನಿಸಬೇಕು.

## ಆತ್ಮೋದ್ಧಾರ

ಮನುಷ್ಯನು ತನ್ನ ಉದ್ಧಾರವಾಗಬೇಕಾದರೆ ಏನು ಮಾಡಬೇಕು?

**ಪ್ರತ್ಯಹಂ ಪ್ರತ್ಯವೇಕ್ಷೇತ ನರಶ್ಚರಿತಮಾತ್ಮನಃ ।**
**ಕಿಂ ನು ಮೇ ಪಶುಭಿಸ್ತುಲ್ಯಂ ಕಿಂ ನು ಸತ್ಪುರುಷೈರಿತಿ ॥**

ಮನುಷ್ಯನು ಪ್ರತಿನಿತ್ಯ ದೈನಂದಿನ ಕರ್ಮಗಳನ್ನೆಲ್ಲಾ ಪೂರೈಸಿದ ಮೇಲೆ, ರಾತ್ರಿಗೆ ಏಕಾಂತದಲ್ಲಿದ್ದು ಚಿಂತಿಸಬೇಕು. ತಾನು ಈ ದಿನ ಬೆಳಗ್ಗಿನಿಂದ ಈವರೆಗೆ ಏನನ್ನೆಲ್ಲಾ ಮಾಡಿದ್ದೇನೆ. ತಾನು ಮಾಡಿದ್ದು ಪಶುವರ್ತನೆಯಾ? ಅಥವಾ ಸಜ್ಜನರ ವರ್ತನೆಯೋ? ಎಂಬುದನ್ನು ತಾತ್ವಿಕವಾಗಿ ಚಿಂತಿಸಿದಾಗ, ಓಹೋ! ನಾನು ಮನುಷ್ಯನಾಗಿ ಅದರಲ್ಲಿಯೂ ಬ್ರಾಹ್ಮಣನಾಗಿ ವೈಷ್ಣವಕುಲದಲ್ಲಿ ಹುಟ್ಟಿಯೂ ಏನು ಮಾಡಿದ್ದು? ಎಲ್ಲಾ ಪಶುವರ್ತನೆ. ಇನ್ನು ಮುಂದೆಯಾದರೂ ಹೀಗೆ ಮಾಡಬಾರದೆಂದು ಪಶ್ಚಾತ್ತಾಪಪಟ್ಟು ಹರಿಸ್ಮರಣೆ ಮಾಡಬೇಕು. ಹೀಗೆ ಪ್ರತಿನಿತ್ಯವೂ ಚಿಂತಿಸುವುದರಿಂದ ತನ್ನಲ್ಲಿರುವ ಪಶುವರ್ತನೆಯನ್ನು ಕ್ರಮೇಣ ಕಮ್ಮಿಮಾಡುತ್ತ ಸಜ್ಜನರ ವರ್ತನೆಯನ್ನು ಆದಷ್ಟು ಜಾಸ್ತಿ ಮಾಡುತ್ತಾ ಬರುವುದರಿಂದ ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳಬಹುದು.

**ಆತ್ಮೈವ ಹ್ಯಾತ್ಮನೋ ಬಂಧುರಿತಿ ವಿದ್ಯಾನ್ಮಹುರ್ಮುಹುಃ ।** –ಗ.ಪು.

ಹೀಗೆ ಮಾಡುವುದರಿಂದ ತನಗೆ ತಾನೇ ಬಂಧು ಆಗುತ್ತಾನೆ. ಹೀಗೆ ಮಾಡದಿದ್ದರೆ 'ಆತ್ಮೈವ ರಿಪುರಾತ್ಮನಃ' (ಭ.ಗೀ.) ತನಗೆ ತಾನೇ ಶತ್ರುವಾಗುತ್ತಾನೆ.

**ತ್ಯಜ ದುರ್ಜನಸಂಸರ್ಗಂ ಭಜ ಸಾಧುಸಮಾಗಮಮ್ ।**

ದುರ್ಜನರ ಸಹವಾಸ ಬಿಟ್ಟು, ಸಜ್ಜನರ ಸಹವಾಸ ಮಾಡು. 'ಸಂತಃ ಸಂಗಸ್ಯ ಭೇಷಜಂ' ತನ್ನ ಉದ್ಧಾರಕ್ಕೆ ಸಜ್ಜನರ ಸಹವಾಸವೇ ಔಷಧಿ.

**ಆಶೀರ್ವಾದ, ನಮಸ್ಕಾರ**

**ಭದ್ರೇ ನನುಪತಂತಂ ತಂ ಪ್ರಣತಂ ಶ್ರೋತ್ರಿಯೋ ಗುರುಃ ।**
**ಆಯುಷ್ಮಾನ್ ಭವ ಮೇಧಾವೀತ್ಯಾಶಿಷಮುದಾಹರೇತ್ ॥** –ಸಂಗ್ರಹ

ಶ್ರೋತ್ರಿಯನಾದ ಗುರುವು ತನಗೆ ನಮಸ್ಕಾರ ಮಾಡಿದವರನ್ನು 'ದೀರ್ಘಾ ಯುಷ್ಮಾನ್ ಭವ', 'ಮೇಧಾವೀ ಭವ' ಎಂದು ಆಶೀರ್ವಾದ ಮಾಡಬೇಕು.

**ವರ್ಣಿನಂ ಚ ಗೃಹಸ್ಥಂ ಚ ಪ್ರಣವಂತಂ ತ್ರಿವಾರ್ಷಿಕಮ್ ।**
**ಆಯುಷ್ಮಾನ್ ಭವ ಸೌಮ್ಯೇತಿ ನಾಮಶರ್ಮಾಪ್ಲುತಂ ವದೇತ್ ॥** –ಸಂಗ್ರಹ

ಬ್ರಾಹ್ಮಣನಾದ ಗೃಹಸ್ಥಾಶ್ರಮಿಯನ್ನೂ, ಮೂರು ವರ್ಷದ ಮೇಲಿನವರನ್ನೂ, ಅವರು ನಮಸ್ಕರಿಸುವಾಗ 'ಆಯುಷ್ಮಾನ್ ಭವ ಅಮುಕಶರ್ಮ ಸೌಮ್ಯ....' ಎಂದು ಆಶೀರ್ವಾದ ಮಾಡಬೇಕು.

**ಕನ್ಯಕಾಂ ಪ್ರಣತಾಂ ವಿಪ್ರಃ ಸಮ್ಯಕ್ ಭರ್ತೃವತೀ ಭವ ।**
**ಊಢಾಂ ನಮಂತೀಂ ಪ್ರವದೇದ್ಭವ ದೀರ್ಘಸುಮಂಗಲೀ ॥** –ಸಂಗ್ರಹ

ಕನ್ನಿಕೆಯು ನಮಸ್ಕಾರ ಮಾಡಿದಾಗ, 'ಸುಭರ್ತೃವತೀ ಭವ' ಎಂದು, ಮದುವೆಯಾದ ಸುವಾಸಿನಿಯರು ನಮಸ್ಕರಿಸಿದಾಗ 'ದೀರ್ಘಸುಮಂಗಲೀ ಭವ' ಎಂದು ಹೇಳಬೇಕು.

**ಪ್ರಣತಾಂ ವಿಧವಾಂ ಬ್ರೂಯಾತ್ ಸಮ್ಯಕ್ ಜ್ಞಾನವತೀ ಭವ ॥** –ಸಂಗ್ರಹ

ವಿಧವಾಸ್ತ್ರೀ ನಮಸ್ಕಾರ ಮಾಡಿದಾಗ 'ಸಮ್ಯಗ್‌ಜ್ಞಾನವತೀ ಭವ' ಎಂದು ಹೇಳಬೇಕು. ಯಾರಿಗಾದರೂ ಆಶೀರ್ವಾದ ಮಾಡುವಾಗ ನಿಂತುಕೊಂಡು ಎಡಕೈಯನ್ನು ತಮ್ಮ ಎದೆಯಲ್ಲಿಟ್ಟು, ತನ್ನ ಬಿಂಬರೂಪಿ ಪರಮಾತ್ಮನನ್ನು ಚಿಂತಿಸಿ ಬಲಕೈಯಲ್ಲಿ ಆಶೀರ್ವಾದ ಮಾಡಬೇಕು.

**ಲಾಜಹೋಮೇ ಚ ಸೀಮಂತೇ ದೇವತಾऽऽವಾಹನೇ ವರೇ ।**
**ಅರ್ಘ್ಯ ತಿಷ್ಠೇದುಪಸ್ಥಾನೇ ಷಡೇತೇ ಭೃಗುಚೋದಿತಾಃ ॥** –ಸ್ಮೃತಿ

ವಿವಾಹದಲ್ಲಿ ಲಾಜಹೋಮ ಮಾಡುವಾಗಲೂ, ಸೀಮಂತದಲ್ಲಿ ಹೆಂಡತಿಯ ತಲೆಗೆ ಹೂ ಇಡುವಾಗಲೂ, ದೇವತಾಪ್ರತಿಮೆಗೆ ಆವಾಹನೆ ಮಾಡುವಾಗಲೂ, ಆಶೀರ್ವಾದ ಮಾಡುವಾಗಲೂ (ವರೇ), ಸಂಧ್ಯಾವಂದನೆಯಲ್ಲಿ ಸೂರ್ಯಾರ್ಘ್ಯ ಕೊಡುವಾಗಲೂ, ಸೂರ್ಯೋಪಸ್ಥಾನ(ಅಗ್ನ್ಯುಪಸ್ಥಾನ) ಮಾಡುವಾಗಲೂ ನಿಂತುಕೊಂಡೇ ಮಾಡಬೇಕು. ಇನ್ನೊಬ್ಬರಿಗೆ ನಮಸ್ಕಾರ ಮಾಡುವಾಗ,

**ಶಿರೋऽಂಜಲಿಸ್ತು ದೇವಾನಾಂ ಗುರೂಣಾಂ ತು ಮುಖಾಂಜಲಿಃ ।**
**ಗ್ರೀವಾಂಜಲಿರ್ನರೇಂದ್ರಾಣಾಂ ಸಮಾನಾಂ ತು ಹೃದಂಜಲಿಃ ॥** –ಸಂಗ್ರಹ

ದೇವರಿಗೆ ನಮಸ್ಕಾರ ಮಾಡುವಾಗ ಎರಡು ಕೈಗಳನ್ನು ಜೋಡಿಸಿ ತಲೆಯ ಮೇಲಿಟ್ಟು ನಮಸ್ಕಾರ ಮಾಡಬೇಕು. ಗುರುಗಳಿಗೆ ಆ ಎರಡೂ ಕೈಗಳ ಅಂಜಲಿಯನ್ನು ಮುಖದವರೆಗೆ ತಂದು, ರಾಜನಿಗೆ ಕುತ್ತಿಗೆಯ ವರೆಗೆ ಆ ಅಂಜಲಿಯನ್ನು ಮಾಡಿಯೂ, ನಮ್ಮ ಸಮಾನಿಕರಿಗೆ ಹೃದಯದವರೆಗೆ ಅಂಜಲಿ ಮಾಡಿ ನಮಸ್ಕಾರ ಪ್ರತಿನಮಸ್ಕಾರ ಮಾಡಬೇಕು.

ಒಂದು ಕೈಯಲ್ಲಿ ಯಾರಿಗೂ ಯಾವಾಗಲೂ ನಮಸ್ಕಾರ ಹೇಳಬಾರದು. ಉಪನಯನ ಆದಮೇಲೆ ಬ್ರಾಹ್ಮಣರಿಗೆ, ಗುರುಹಿರಿಯರಿಗೆ ನಮಸ್ಕರಿಸುವಾಗ ಗೋತ್ರ, ನಾಮ ಹೇಳಿ, 'ಶರ್ಮಾಽಹಂ ಭೋ ಅಭಿವಾದಯೇ' ಎಂದು ಹೇಳಿಯೇ ನಮಸ್ಕಾರ ಮಾಡಬೇಕು.

**ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ।**
**ಚತ್ವಾರಿ ತಸ್ಯ ವರ್ಧಂತೇ ಹ್ಯಾಯುರ್ವಿದ್ಯಾ ಯಶೋ ಧನಮ್ ॥** –ಮ.ಸ್ಮೃ.

ಗುರುಹಿರಿಯರಿಗೆ ನಮಸ್ಕಾರ ಮಾಡುವವನಿಗೂ, ನಿತ್ಯದಲ್ಲಿ ವೃದ್ಧರ (ಮಾತಾ ಪಿತೃಗಳ) ಸೇವೆಮಾಡು ವವನಿಗೂ ಆಯುಷ್ಯ, ವಿದ್ಯಾ(ಜ್ಞಾನ), ಯಶಸ್ಸು, ಸಂಪತ್ತು ಹೀಗೆ ನಾಲ್ಕು ಫಲ ಅಭಿವೃದ್ಧಿಯಾಗುತ್ತದೆ. ನಮಗೆ ಯಾರು ನಮಸ್ಕರಿಸಿದರೂ,

**ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ ವಿಧೀಯತೇ ಸಾಧುಮಿಥಃ ಸುಮಧ್ಯಮೇ ।**
**ಪ್ರಾಜ್ಞೈಃ ಪರಸ್ಮೈ ಪುರುಷಾಯ ಭೂಯಸೇ ಗುಹಾಶಯಾಯೈವ ನ ದೇಹಮಾನಿನೇ ॥** –ಭಾಗ.

ಗುರುಹಿರಿಯರು ಬಂದಾಗ ಮೇಲಕ್ಕೆದ್ದು ಎದುರುಗೊಳ್ಳುವುದು, ಆಲಿಂಗನ ನಮಸ್ಕಾರಾದಿಗಳಿಂದ ಗೌರವಿಸು ವುದು ಮುಂತಾದುವುಗಳು, ಹೇ ಸುಮಧ್ಯಮೇ, ಮಂಗಳಾಂಗಿಯೇ! ಜ್ಞಾನಿಗಳಿಂದ ಪರಸ್ಪರವಾಗಿ ಹೃದ್ಗುಹಾ ವಾಸಿಯಾದ, ಗುಣ ಪೂರ್ಣನಾದ ಪುರುಷೋತ್ತಮನಿಗಾಗಿ ಮಾಡಲ್ಪಡುತ್ತದೆ. ದೇಹಾಭಿಮಾನಿ ಜೀವನಿಗೆ ಅಲ್ಲ. ಇದು ಶಾಸ್ತ್ರಸಮ್ಮತ. ಹೀಗಿರುವುದರಿಂದ ನಮ್ಮಿಂದ ವಯಸ್ಸಿನಲ್ಲಿ ದೊಡ್ಡವರು ಸಣ್ಣವರು ಯಾರು ನಮಸ್ಕರಿಸಿದರೂ ಅದು ನಮಗಲ್ಲ; ಅದು ಬಿಂಬರೂಪೀ ಪರಮಾತ್ಮನಿಗೇ ಎಂದು ತಿಳಿಯಬೇಕು. ನಾವು ಇನ್ನೊಬ್ಬರಿಗೆ ನಮಸ್ಕಾರ ಮಾಡು ವಾಗಲೂ ಅವರಲ್ಲಿರುವ ಅವರ ಬಿಂಬರೂಪೀ ಪರಮಾತ್ಮನಿಗೇ ನಮಸ್ಕಾರ ಮಾಡುವುದೆಂದು ಅನುಸಂಧಾನ ಮಾಡಿಕೊಳ್ಳಬೇಕು (ಇದು ಭಾಗವತದಲ್ಲಿ ದಕ್ಷಯಜ್ಞ ಪ್ರಕರಣದಲ್ಲಿ ಪಾರ್ವತಿಗೆ ಪರಮೇಶ್ವರ ಹೇಳಿದ ಮಾತು).

ಪ್ರತಿಯೊಂದು ಕರ್ಮಾಂಗದ ಕೊನೆಯಲ್ಲಿ ಮಂತ್ರಾಕ್ಷತೆ ಮಾಡಿ ಮಂತ್ರಾಕ್ಷತೆ ಕೊಟ್ಟು (ಅಥವಾ ತಲೆಗೆ ಹಾಕಿ), ಆಶೀರ್ವಾದ ಮಾಡುವುದಿದೆ. ಇದಕ್ಕೆ ಏನರ್ಥ? ಎಲ್ಲಾ ವೇದಜ್ಞ ಬ್ರಾಹ್ಮಣರು ಕೈಯಲ್ಲಿ ಅಕ್ಷತೆಕಾಳು ಹಿಡಿದುಕೊಂಡು ವೇದಮಂತ್ರ ಹೇಳಿ ಯಜಮಾನನ ಹತ್ತಿರ ಕೊಟ್ಟು 'ಸ್ವಸ್ತಿ ಮಂತ್ರಾರ್ಥಾಃ ಸತ್ಯಾಃ ಸಫಲಾಃ ಸಂತು' –ನಾವು ಇದುವರೆಗೆ ಹೇಳಿರುವ ವೇದಮಂತ್ರದ ಅರ್ಥ ನಿನಗೆ ಸಫಲವಾಗಲಿ ಎಂದು ಇಲ್ಲಿ ಹೇಳುವ ಮಂತ್ರಗಳಲ್ಲಿ ಯಜಮಾನನಿಗೆ ಮುಂದೆ ಐಹಿಕಾಮುಷ್ಮಿಕ ಶ್ರೇಯಸ್ಸಿಗೆ ಬೇಕಾಗುವ ಎಲ್ಲಾ ಫಲಗಳನ್ನೂ ಹೇಳಿದೆ. ಈ ಮಂತ್ರ ಹೇಳಿ ಪುರೋಹಿತರು ಆಶೀರ್ವಾದ ಹೇಳುವಾಗ ಸಭೆಯಲ್ಲಿರುವ ಎಲ್ಲಾ ಬ್ರಾಹ್ಮಣರೂ 'ತಥಾಸ್ತು' ಎಂದು ಹೇಳುತ್ತಾರೆ. ಇದರಿಂದ ಯಜಮಾನನ ಸರ್ವಾರಿಷ್ಟವೂ ಪರಿಹಾರವಾಗಿ ಇಷ್ಟಾರ್ಥಸಿದ್ಧಿಯಾಗುತ್ತದೆ.

**ಬ್ರಾಹ್ಮಣಾ ಯಾನಿ ಭಾಷಂತೇ ಮನ್ಯಂತೇ ತಾನಿ ದೇವತಾಃ ।**

ವೇದಜ್ಞ ಬ್ರಾಹ್ಮಣರು ಸಂತುಷ್ಟರಾಗಿ ಏನು ಆಶೀರ್ವಾದ ಮಾಡುತ್ತಾರೋ ಅದನ್ನು ದೇವತೆಗಳು ಅನುಮೋದಿಸುತ್ತಾರೆ. ಆದ್ದರಿಂದಲೇ, 'ಅಕ್ಷತಂ ವಿಪ್ರಹಸ್ತೇನ', 'ವೇದಾಭ್ಯಾಸೇನ ವಿಪ್ರತ್ವಂ'– ವೇದಜ್ಞರಾದ ಬ್ರಾಹ್ಮಣರು ವೇದಮಂತ್ರ ಹೇಳಿ ದೇವರಲ್ಲಿ ಪ್ರಾರ್ಥಿಸಿ ಕೊಟ್ಟ ಅಕ್ಕಿಕಾಳು ಮಂತ್ರಾಕ್ಷತೆ. ವೇದಮಂತ್ರ ಹೇಳದೆ, ವೇದ ತಿಳಿಯದವನು ಕೊಟ್ಟದ್ದು ಅಕ್ಕಿಕಾಳು ಮಾತ್ರ.

ಎಲ್ಲಾ ಮಠಗಳಲ್ಲಿಯೂ ಪ್ರತಿನಿತ್ಯ ರಾತ್ರಿಪೂಜೆಯ ಅನಂತರ ಎಲ್ಲಾ ವೇದಜ್ಞ ಬ್ರಾಹ್ಮಣರು ಅಕ್ಷತೆಕಾಳನ್ನು ಕೈಯಲ್ಲಿ ಹಿಡಿದುಕೊಂಡು ಈ ವೇದಮಂತ್ರಗಳನ್ನೆಲ್ಲಾ ಹೇಳಿ ಮಂತ್ರಾಕ್ಷತೆ ಹರಿವಾಣದಲ್ಲಿ ಹಾಕಿದ್ದನ್ನು ಶ್ರೀಗಳು ತಾವು ತಲೆಗೆ ಹಾಕಿಕೊಂಡು ಅನಂತರ ಎಲ್ಲರಿಗೂ ಕೊಡುತ್ತಾರೆ. ಈ ಮಂತ್ರಾಕ್ಷತೆಯ ತಟ್ಟೆಯಲ್ಲಿ ಮಂತ್ರಾಕ್ಷತೆ ಎಂದೂ ಖಾಲಿಯಾಗುವುದಿಲ್ಲ. ಕಡಿಮೆಯಾದಾಗ ಬೇರೆ ಅಕ್ಷತೆಕಾಳು ಮಾಡಿ ಇದಕ್ಕೆ ಸೇರಿಸುವ ಕ್ರಮದಿಂದ ಸೇರಿಸುತ್ತಾ ಬರುತ್ತಾರೆ. ಈ ಮಂತ್ರಾಕ್ಷತೆತಟ್ಟೆ ಹಿಂದಿನ ಕಾಲದಿಂದ ಪರಂಪರೆಯಲ್ಲಿ ಬಂದದ್ದು. ಆದ್ದರಿಂದಲೇ ಗುರುಗಳು ಕೊಟ್ಟ ಮಂತ್ರಾಕ್ಷತೆ ಅಷ್ಟು ಪ್ರಾಶಸ್ತ್ಯ.

**ಲೋಕಾನುಭವ**

ನಾವು ನಮ್ಮ ಶಿಷ್ಯವರ್ಗವಲ್ಲದ ಬೇರೆ ಕಡೆಗೆ ಬೇರೆ ಪುರೋಹಿತರ ಒಟ್ಟಿಗೆ ಹೋದಾಗಲೂ, ಅಥವಾ ನಮ್ಮ ಗುರುಗಳ ಜೊತೆಯಲ್ಲಿಯೇ ಹೋದಾಗಲೂ, ಅಲ್ಲಿ ನಡೆಯುವ ಕರ್ಮಾಂಗಗಳನ್ನೆಲ್ಲಾ ಕೂಲಂಕಷವಾಗಿ ನಿರೀಕ್ಷಿಸುತ್ತಿದ್ದು, ಗುರುಗಳಾಗಲೀ ಅಥವಾ ಇನ್ನೊಬ್ಬರು ಪುರೋಹಿತರಾಗಲೀ ಅಲ್ಲಿ ಕರ್ಮಾಂಗಗಳನ್ನೆಲ್ಲಾ ಹೇಗೆ ಮಾಡಿಸಿದ್ದಾರೆ. ನಮಗೆ ತಿಳಿಯದ ಶಾಸ್ತ್ರೋಕ್ತವಾದ ವಿಶೇಷರೀತಿಯಿಂದ ಕರ್ಮಾಂಗಗಳನ್ನು ಯಾವುದನ್ನು ಹೆಚ್ಚು ಮಾಡಿದ್ದಾರೆ ಇತ್ಯಾದಿಗಳನ್ನು ಚೆನ್ನಾಗಿ ಗ್ರಹಿಸಬೇಕು. ಹೀಗೆ ನಾಲ್ಕು ಕಡೆಗಳಲ್ಲಿ ನೋಡುತ್ತಾ ಬಂದಾಗ ನಮಗೆ ಲೋಕಾನುಭವ ತುಂಬಾ ಆಗುತ್ತದೆ.

**ಆಚಾರ್ಯಾತ್ಪಾದಮಾದತ್ತೇ ಪಾದಂ ಶಿಷ್ಯಃ ಸ್ವಮೇಧಯಾ ।**
**ಪಾದಂ ಸಬ್ರಹ್ಮಚಾರಿಭ್ಯಃ ಪಾದಂ ಕಾಲಕ್ರಮೇಣ ತು ॥**

ವಿದ್ಯೆ ಕಲಿಯುವಾಗ ಗುರುಗಳು ಹೇಳಿಕೊಟ್ಟದ್ದರಲ್ಲಿ ಕಾಲಂಶ ಬರುತ್ತದೆ. ಅವರು ಹೇಳಿಕೊಟ್ಟದ್ದನ್ನು ಮನನ ಮಾಡುವಾಗ ಪುನಃ ಕಾಲಂಶ ಜಾಸ್ತಿ ಬರುತ್ತದೆ. ಇದನ್ನೇ ಅರ್ಥವಾಗದ ವಿಷಯವನ್ನು ಸಹಪಾಠಿ ವಿದ್ಯಾರ್ಥಿಗಳ ಜೊತೆಗೆ ವಿಚಾರವಿನಿಮಯ ಮಾಡಿದಾಗ ಪುನಃ ಕಾಲಂಶ ಜಾಸ್ತಿ ತಿಳಿಯುತ್ತದೆ. ಹೀಗೆ ಮುಕ್ಕಾಲಂಶ ತಿಳಿದ ಹಾಗಾಯಿತು. ಇನ್ನುಳಿದ ಕಾಲಂಶವನ್ನು ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಪುರೋಹಿತರು ಮಾಡುವುದನ್ನು ನೋಡಿ ತಿಳಿದುಕೊಂಡಾಗ ಕಾಲಕ್ರಮೇಣ ವಿದ್ಯೆ ಪೂರ್ತಿಯಾಗುತ್ತದೆ. ಎಲ್ಲಾ ಕಡೆಗಳಲ್ಲಿಯೂ ಹೋದಾಗ ಇದನ್ನೇ ಗಮನಿಸುತ್ತಾ ಬಂದಾಗ ಒಳ್ಳೆಯ ವಿಷಯ ಇದ್ದರೆ ಮಾತ್ರ ಗ್ರಹಣ ಮಾಡಿ, ಮುಂದೆ ನಾವೂ ಅದರಂತೆಯೇ ಮಾಡಿಸಬೇಕಲ್ಲದೆ, ಒಬ್ಬ ತಿಳಿಯದವನು ತಪ್ಪಾಗಿ ಮಾಡಿದರೂ ಅಥವಾ ಅಧಿಕಪ್ರಸಂಗ ಮಾಡಿದರೂ ಅದನ್ನು ಗ್ರಹಿಸಲೇ ಬಾರದು. ಅದು ಶಾಸ್ತ್ರಸಮ್ಮತವೂ ಆಗುವುದಿಲ್ಲ.

**ಬ್ರಾಹ್ಮಣ ಜೀವನ**

**ಋತಾಽಮೃತಾಭ್ಯಾಂ ಜೀವೇತ ಮೃತೇನ ಪ್ರಮೃತೇನ ವಾ ।**
**ಸತ್ಯಾನೃತಾಭ್ಯಾಂ ಜೀವೇತ ನ ಶ್ವವೃತ್ತ್ಯಾ ಕದಾಚನ ॥** –ಭಾ.ಗ.

**ಋತಮುಂಛಲಶಿಲಂ ಪ್ರೋಕ್ತಮಮೃತಂ ಯದಯಾಚಿತಮ್ ।**
**ಪ್ರಮೃತಂ ಕರ್ಷಣಂ ಪ್ರೋಕ್ತಂ ಮೃತಂ ಯಾಚ್ಞಾ ತಥೈವ ಚ ।**
**ಸತ್ಯಾನೃತಂ ತು ವಾಣಿಜ್ಯಂ ಶ್ವವೃತ್ತಿರ್ನೀಚಸೇವನಮ್ ॥** –ಭಾ.ಗ.

'ಋತಂ' ಎಂದರೆ ಶಿಲೋಂಛವೃತ್ತಿ. ಯಜಮಾನನು ಗದ್ದೆಯಲ್ಲಿದ್ದ ಪೈರೆಲ್ಲವನ್ನು ಕೊಂಡುಹೋದ ಮೇಲೆ ಗದ್ದೆಯಲ್ಲಿ ಬಿದ್ದಿರುವ ಭತ್ತಗಳನ್ನು ಸಂಗ್ರಹಿಸಿ, ಅದರಲ್ಲಿ ಅಥವಾ ಬೀಸುವ ಕಲ್ಲಿನಲ್ಲಿ ಅಕ್ಕಿ ಅಥವಾ ಗೋಧಿಯನ್ನು ಬೀಸಿ, ಬೀಸುವವನು ಹಿಟ್ಟನ್ನು ಕೊಂಡುಹೋದಮೇಲೆ, ಬೀಸುವ ಕಲ್ಲಿನಲ್ಲಿ ಉಳಿದಿರುವ

ಹಿಟ್ಟನ್ನು ಸಂಗ್ರಹಿಸಿ ಇದರಲ್ಲಿ ಜೀವಿಸುವುದು ಉತ್ತಮಜೀವನ. 'ಅಮೃತಂ' ಎಂದರೆ ಇನ್ನೊಬ್ಬರಲ್ಲಿ ಬೇಡದೆ ತನ್ನಲ್ಲಿ ಇದ್ದುದರಲ್ಲಿ ಜೀವಿಸುವುದು. ಇದೂ ಉತ್ತಮವೇ. 'ಪ್ರಮೃತ' ಎಂದರೆ ಭೂಮಿವ್ಯವಸಾಯ ಮಾಡಿ ಅದರಲ್ಲಿ ಬಂದುದರಿಂದ ಜೀವಿಸುವುದು ಅಥವಾ 'ಮೃತಂ' ಎಂದರೆ ಭಿಕ್ಷಾಟನೆಯಲ್ಲಿ ಬಂದುದರಿಂದಲೇ ಜೀವಿಸುವುದು –ಇದು ಮಧ್ಯಮಜೀವನ. 'ಸತ್ಯಾನೃತಂ ತು ವಾಣಿಜ್ಯಂ' ಎಂದರೆ ರಸಪದಾರ್ಥವಾದ ಅನ್ನ, ಉಪ್ಪು, ವಸ್ತ್ರ, ಹತ್ತಿ ಇವುಗಳನ್ನು ಬಿಟ್ಟು ಬಾಕಿ ಪದಾರ್ಥಗಳನ್ನು ಅಲ್ಪಲಾಭದಲ್ಲಿ ಮಾರಿ ಅದರಲ್ಲಿ ಬಂದ ಹಣದಿಂದ ಜೀವಿಸುವುದು. ಇದು ಅಧಮಜೀವನ (ಈ ವ್ಯಾಪಾರದಲ್ಲಿಯೂ ಮುಂದೆ ತನ್ನ ಜೀವನಕ್ಕೆ ಬೇಕಾದಷ್ಟು ಹಣ ಸೇರಿದಾಗ ಈ ವ್ಯಾಪಾರವೃತ್ತಿ ಬಿಟ್ಟು ಇದ್ದುದರಲ್ಲಿ ತನ್ನ ನಿತ್ಯಾನುಷ್ಠಾನ ಮಾಡಿ ಜೀವಿಸಬೇಕು). 'ಶ್ವವೃತ್ತಿರ್ನೀಚಸೇವನಂ' ನೀಚಜಾತಿಯ (ತನ್ನ ಜಾತಿಯಿಂದ ಕೆಳಗಿನ ಜಾತಿಯ) ಯಜಮಾನನಲ್ಲಿ ಕೆಲಸಮಾಡಿ ಸಂಬಳ ತೆಗೆದುಕೊಂಡ ಹಣದಲ್ಲಿ ಜೀವನ ಮಾಡುವುದು. 'ನ ಶ್ವವೃತ್ತ್ಯಾ ಕದಾಚನ' ಎಂದಂತೆ ಯಾವಾಗಲೂ ಈ ರೀತಿ ಜೀವನ ಮಾಡಬಾರದು.

ದೇವರ ದಯೆಯಿಂದ ಈ ಜೀವನಿಗೆ ಬಂದಿರುವ ಬ್ರಾಹ್ಮಣಜನ್ಮದಲ್ಲಿ ಶಾಸ್ತ್ರೋಕ್ತ ರೀತಿಯಿಂದ ಜೀವಿಸಿ, ಈ ಜನ್ಮವನ್ನು ಆದಷ್ಟು ಸಾರ್ಥಕ ಮಾಡಿಕೊಳ್ಳುವುದೇ ಮುಖ್ಯ. ಹೊರತು, ಇದನ್ನು ಹಾಳುಮಾಡಿಕೊಳ್ಳಬಾರದು ಎಂಬ ಧ್ಯೇಯ ಯಾರಿಗೆ ಖಚಿತವಾಗಿದೆಯೋ ಅಂಥವರು ಮಾತ್ರ ಈ ಮೇಲೆ ಹೇಳಿರುವಂತೆ ಜೀವಿಸಿ ತಮ್ಮ ಉದ್ಧಾರವನ್ನು ಮಾಡಿಕೊಳ್ಳಬಹುದು. 'ಮಾನವ ಜನ್ಮ ದೊಡ್ಡದು, ಇದನ್ನು ಹಾಳು ಮಾಡಿಕೊಳ್ಳಬೇಡಿರೋ ಹುಚ್ಚಪ್ಪಗಳಿರಾ' ಎಂದು ಪುರಂದರದಾಸರು ಹೇಳಿದ್ದಾರೆ.

## ಸ್ವರ್ಗದಿಂದ ಬಂದು ಸ್ವರ್ಗಕ್ಕೆ ಹೋಗುವವರು

**ಸ್ವರ್ಗಸ್ಥಿತಾನಾಮಿಹ ಜೀವಲೋಕೇ ಚತ್ವಾರಿ ಚಿಹ್ನಾನಿ ವಸಂತಿ ದೇಹೇ ।**
**ದಾನಪ್ರಸಂಗೋ ಮಧುರಾ ಚ ವಾಣೀ ದೇವಾರ್ಚನಂ ಬ್ರಾಹ್ಮಣತರ್ಪಣಂ ಚ ॥** –ಸಂಗ್ರಹ

ಸ್ವರ್ಗದಿಂದ ಬಂದು ಭೂಮಿಯಲ್ಲಿ ಹುಟ್ಟಿದವರಲ್ಲಿ ನಾಲ್ಕು ಗುಣಗಳಿರುತ್ತವೆ. ೧. ದಾನಕೊಡುವ ಬುದ್ಧಿ. ೨. ಮಧುರಮಧುರವಾದ ಮಾತು. ೩. ದೇವರ ಪೂಜೆಯಲ್ಲಿ ಆಸಕ್ತಿ. ೪. ಯಾವಾಗಲೂ ಬ್ರಾಹ್ಮಣಸಂತರ್ಪಣೆ ಮಾಡುತ್ತಿರುವುದು. ಇಂಥವರು ಪುನಃ ಸ್ವರ್ಗಕ್ಕೇ ಹೋಗುವರು.

## ನರಕದಿಂದ ಬಂದು ನರಕಕ್ಕೇ ಹೋಗುವವರು

**ಅತ್ಯಂತಕೋಪಃ ಕಟುಕಾ ಚ ವಾಣೀ ದರಿದ್ರತಾ ಚ ಸ್ವಜನೇಷು ವೈರಮ್ ।**
**ನೀಚಪ್ರಸಂಗಃ ಕುಲಹೀನಸೇವಾ ಚಿಹ್ನಾನಿ ದೇಹೇ ನರಕಸ್ಥಿತಾನಾಮ್ ॥** –ಸಂಗ್ರಹ

ಅತ್ಯಂತ ಕೋಪ, ಕಟುವಾದ ಮಾತು, ಯಾವಾಗಲೂ ದಾರಿದ್ರ್ಯ, ಸ್ವಂತ ಜನರಲ್ಲಿ ದ್ವೇಷ, ನೀಚಜನರ ಸಹವಾಸ ಅಥವಾ ನೀಚಕೃತ್ಯ ಮಾಡುವಿಕೆ, ತನ್ನ ಕುಲಕ್ಕೆ ಹೇಳದ ಹೀನ ಕೆಲಸ ಮಾಡುವುದು –ಇಷ್ಟು ಚಿಹ್ನೆಗಳು ನರಕದಿಂದ ಬಂದು ನರಕಕ್ಕೇ ಹೋಗುವವರದ್ದು.

## ಕಲಿಯುಗದಲ್ಲಿ

**ಬಹೂನಿ ಧರ್ಮಜಾಲಾನಿ ಸಾಪಾಯಾನಿ ಕಲೌಯುಗೇ ।**
**ಅನ್ನದಾನಂ ಹರೌ ಭಕ್ತಿರನಪಾಯಮಿದಂ ದ್ವಯಮ್ ॥** –ಸ್ಮೃತಿ

ಕಲಿಯುಗದಲ್ಲಿ ಪ್ರಾಯಃ ಎಲ್ಲಾ ಧರ್ಮಕಾರ್ಯಗಳಿಗೂ ಅಪಾಯವಿದೆ. ಅನ್ನದಾನಕ್ಕೆ ಹಾಗೂ ಹರಿಭಕ್ತಿಗೆ (ನಾಮಸಂಕೀರ್ತನೆ) ಅಪಾಯವಿಲ್ಲ.

**ಕಲಿಯುಗದಲ್ಲಿ ಬ್ರಾಹ್ಮಣರ ಶಾಪ ತಟ್ಟುವುದಿಲ್ಲ**

**ಮುಖಂ ದಗ್ಧಂ ಪರಾನ್ನೇನ ಹಸ್ತೌ ದಗ್ಧೌ ಪ್ರತಿಗ್ರಹಾತ್ ।**
**ಮನೋ ದಗ್ಧಂ ಪರಸ್ತ್ರೀಭಿಃ ಬ್ರಹ್ಮಶಾಪಃ ಕುತಃ ಕಲೌ ॥** –ಸ್ಮೃ.ರ.

ಶಾಪಾನುಗ್ರಹ ಫಲಿಸಬೇಕಾದರೆ ತ್ರಿಕರಣ (ಮನಸ್ಸು, ವಾಕ್, ಕಾಯ(ಹಸ್ತ)) ಶುದ್ಧಿಯಾಗಿರಬೇಕು. ಕಲಿಯುಗದಲ್ಲಿ ಬ್ರಾಹ್ಮಣರ ವಾಗಿಂದ್ರಿಯ ಪರಾನ್ನಭೋಜನ ಮಾಡಿ ಅದರ ಶಕ್ತಿ ಸುಟ್ಟುಹೋಗಿರುತ್ತದೆ. ಪ್ರತಿಗ್ರಹ ಮಾಡಿ ಕೈಗಳ ಶಕ್ತಿಯೂ ಸುಟ್ಟುಹೋಗಿದೆ. ಪರಸ್ತ್ರೀಯರ ಚಿಂತನೆಯಿಂದ ಮನಸ್ಸಿನ ಶಕ್ತಿಯೂ ಸುಟ್ಟುಹೋಗಿದೆ. ಹೀಗೆ ತ್ರಿಕರಣಗಳ ಶಕ್ತಿಯು ಸುಟ್ಟುಹೋಗಿರುವುದರಿಂದ ಕಲಿಯುಗದಲ್ಲಿ ಬ್ರಾಹ್ಮಣರ ಶಾಪ ತಟ್ಟುವುದಿಲ್ಲ. ಇದರಿಂದ ಏನು ತಿಳಿಯಬೇಕೆಂದರೆ, ಪರಾನ್ನಕ್ಕೆ ಹೋಗಬಾರದು. ಪ್ರತಿಗ್ರಹ ಮಾಡದೆ, 'ಮಾತೃವತ್ ಪರದಾರೇಷು' –ಎಲ್ಲಾ ಸ್ತ್ರೀಯರನ್ನು ತನ್ನ ತಾಯಿಯಂತೆ ಕಂಡು, ಅವರಲ್ಲಿ ಗೌರವಬುದ್ಧಿಯುಳ್ಳವರಾದಾಗ ಮನಸ್ಸು ನಿರ್ಮಲವಾಗಿ ಶಾಪಾನುಗ್ರಹವು ಫಲಿಸಬಹುದು.

**ಪಂಚಮೇಽಹನಿ ಷಷ್ಠೇ ವಾ ಹ್ಯನ್ನಂ ಪಚತಿ ಯೋ ಗೃಹೇ ।**
**ಸ ಏವ ಬ್ರಾಹ್ಮಣಶ್ರೇಷ್ಠಃ ಸಂಪ್ರಾಪ್ತೇ ತು ಕಲೌ ಯುಗೇ ॥**

ಐದಾರು ದಿವಸಗಳಲ್ಲಿ ಒಂದು ದಿನವಾದರೂ ಮನೆಯಲ್ಲಿ ಅನ್ನ ಬೇಯಿಸಿ ಊಟ ಮಾಡುವವನು ಕಲಿಯುಗದಲ್ಲಿ ಶ್ರೇಷ್ಠ ಬ್ರಾಹ್ಮಣನೆನಿಸುವನು.

ಭಾಗವತದಲ್ಲಿ ಪ್ರಹ್ಲಾದ ತಿಳಿಸಿದ 'ದುರ್ಲಭಂ ಮಾನುಷಂ ಜನ್ಮ' ಎಂದು. ಹೌದಲ್ಲವೇ, ಮನುಷ್ಯಜನ್ಮ ಬರುವುದೇ ಅತಿವಿರಳ. ಬಂದದ್ದೂ ಕಿಸೆಯಲ್ಲಿದ್ದ ನೋಟಿನಂತೆ ಎಂದು ಕೈಜಾರುತ್ತದೋ ಗೊತ್ತಿಲ್ಲ. ಹಾಗಾದರೆ ದೇಹ ಜಾರಿ ಹೋಗುವುದಕ್ಕಿಂತ ಮೊದಲು ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕು. ಅದು ಹೇಗೆಂದು ಚಿಂತಿಸುವವರಿಗಾಗಿಯೇ ಕರುಣಾಸಮುದ್ರರಾದ ಶ್ರೀ ಮಧ್ವಾಚಾರ್ಯರು ಸಕಲಶಾಸ್ತ್ರಗಳ ಸಾರವನ್ನು ಚುಟುಕಾಗಿ ನಮ್ಮ ಮುಂದೆ ತೆರೆದಿಟ್ಟರು.

**ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಮ್ ।**
**ಹರಿರೇವ ಪರೋ ಹರಿರೇವ ಗುರುರ್ಹರಿರೇವ ಜಗತ್ ಪಿತೃಮಾತೃಗತಿಃ ॥** –ದ್ವಾದಶಸ್ತೋತ್ರ

'ನಿನ್ನ ಪಾಲಿನ ಕರ್ಮ ಮಾಡು. ಬಂದುದನ್ನು ಉಣ್ಣು. ಹರಿಯ ಚರಣಗಳರಿವು ತಪ್ಪದಿರಲಿ. ಹರಿಯೇ ಪರದೈವತವು. ಹರಿಯೇ ಗುರು ಆಸರೆಯು, ಹರಿಯೊಬ್ಬನೇ ಜಗದ ತಾಯಿತಂದೆ.

**ಸಾರ್ಥಕ ಬದುಕಿಗೆ ಮಾಡಬೇಕಾದ್ದಿಷ್ಟೇ:**

ತಮ್ಮ ವರ್ಣಾಶ್ರಮಧರ್ಮಕ್ಕೆ ಉಚಿತವಾದ ಕರ್ಮಗಳನ್ನು ವಂಚನೆಯಿಲ್ಲದೇ ಆಚರಿಸುವುದೇ ಬದುಕಿನ ಮೊದಲ ಮೆಟ್ಟಿಲು. ಇದನ್ನೇ ಆಚಾರ್ಯರು 'ನಿಜಂ ನಿಯತಂ ಕರ್ಮ ಕುರು' ಎಂದು ಆದೇಶಿಸಿರುವರು. ಈ ರೀತಿ ವಿಹಿತಕರ್ಮಗಳನ್ನು ಆಚರಿಸುತ್ತಾ ಏನು ಲಭಿಸುತ್ತದೆಯೋ ಅದರಲ್ಲಿ ತೃಪ್ತಿ ಹೊಂದುವುದು ಸಾರ್ಥಕ ಬದುಕಿನ ಎರಡನೆಯ ಮೆಟ್ಟಿಲು. ಅಂದರೆ ದುರಾಸೆ ಇಲ್ಲದ ಬದುಕೇ ಸಾರ್ಥಕಬದುಕು ಎಂದರ್ಥ. ಅದನ್ನೇ ಆಚಾರ್ಯರು 'ಭುಂಕ್ಷ್ವ' ಎಂದು ಆದೇಶಿಸಿರುವರು. ಆದರೆ ಮೊದಲೆರಡು ಮೆಟ್ಟಿಲುಗಳನ್ನು ಏರಿದ್ದು ಸಾರ್ಥಕವಾಗುವುದು ಮೂರನೇ ಮೆಟ್ಟಲನ್ನೇರಿದಾಗಷ್ಟೇ. ಅದೇ ಎಂದಿಗೂ ಭಗವಂತನಲ್ಲಿ ಬಾಗಿದ ಮನವುಳ್ಳವನಾಗಿರುವುದು. 'ನಾನೇ ಸ್ವತಂತ್ರವಾಗಿ ಎಲ್ಲವನ್ನು ಮಾಡುವವ' ಎಂಬ ಅಹಂಕಾರವನ್ನು ಮನಸ್ಸಿನಿಂದ ಕಿತ್ತೊಗೆದು 'ಆ ಭಗವಂತನೇ ನನ್ನಿಂದ ಎಲ್ಲವನ್ನೂ ಮಾಡಿಸುವವ' ಎಂಬ ಭಾವನೆಯನ್ನು ತುಂಬುವುದೇ 'ಹರಿಪಾದ–

ವಿನಮ್ರಧಿಯಾ ಸತತಂ' ಎಂಬುದರ ಅಭಿಪ್ರಾಯ. ಈ ಭಾವನೆ ಇಲ್ಲದ ವಿಹಿತವಾದ ಕರ್ಮಾಚರಣೆ ಯಾಗಲೀ, ದುರಾಸೆಯಿಲ್ಲದ ಬದುಕಾಗಲೀ ವ್ಯರ್ಥವೇ ಸರಿ.

ಸಾರ್ಥಕಬದುಕಿನ ಅಂತಿಮ ಮೆಟ್ಟಲೇ 'ಹರಿರೇವ ಪರೋ ಹರಿರೇವ ಗುರುಃ ಹರಿರೇವ ಜಗತ್‌ಪಿತೃಮಾತೃಗತಿಃ' 'ಹರಿಯೇ ಸರ್ವೋತ್ತಮ, ಹರಿಯೇ ಜಗತ್ತಿನ ಮೂಲಗುರು, ಹರಿಯೇ ಸಕಲಜಗತ್ತಿನ ಪಾಲಕ-ಜ್ಞಾನದಾಯಕ' ಎಂಬ ಜ್ಞಾನವನ್ನು ವಾಯುಜೀವೋತ್ತಮತ್ವ, ತಾರತಮ್ಯಸಹಿತವಾಗಿ ಸಂಪಾದಿಸುವುದೇ ಬದುಕಿನ ಮುಖ್ಯಗುರಿ. ಇವೇ ಸಾರ್ಥಕ ಬದುಕಿನ ನಾಲ್ಕು ಮೆಟ್ಟಲುಗಳು.

ಇವೇ ನಾಲ್ಕು ಪುರುಷಾರ್ಥಗಳನ್ನು ಪಡೆಯುವ ರಹಸ್ಯ:

**ವಿಹಿತಕರ್ಮಾಚರಣೆಯೇ ಧರ್ಮದ ರಹಸ್ಯ**
**ಬಂದುದರಲ್ಲಿ ಸಂತುಷ್ಟಿಯೇ ಅರ್ಥದ ರಹಸ್ಯ**
**ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸುವುದೇ ಕಾಮದ ರಹಸ್ಯ**
**ಹರಿಸರ್ವೋತ್ತಮ ಜ್ಞಾನಸಂಪಾದನೆಯೇ ಮೋಕ್ಷದ ರಹಸ್ಯ**

– ಅದೇ ಆಚಾರ್ಯಮಧ್ವರ ಸಂದೇಶ, ಆದೇಶ.

**ರಕ್ಷತೀತ್ಯೇವ ವಿಶ್ವಾಸಃ ತದೀಯೋಽಹಮಿತಿ ಸ್ಮೃತಿಃ ।**
**ಶರಣಾಗತಿರೇಷಾ ಸ್ಯಾದ್ ವಿಷ್ಣೌ ಮೋಕ್ಷಫಲಪ್ರದಾ ॥**

– ಇಲ್ಲಿಗೆ ಸದಾಚಾರಸಂಗ್ರಹ ಸಮಾಪ್ತವಾಯಿತು –

⏭ ⏮

**ಪರಿಶಿಷ್ಟ – ೨**

## ಅಥ ಕುಂಭವಿವಾಹಯೋಗಃ

**ಸೂರ್ಯಭೌಮಾರ್ಕಿವಾರೇಷು ತಿಥಿರ್ಭದ್ರಾಶತಾಭಿಧಮ್ ।
ಆಶ್ಲೇಷಾಕೃತ್ತಿಕಾಯೋಗೇ ತತ್ರಜಾತಾ ವಿಷಾಂಗನಾ ॥**

**ಜನುರ್ಲಗ್ನೇ ರಿಪುಕ್ಷೇತ್ರ ಸಂಸ್ಥಿತಃ ಪಾಪಖೇಚರಃ ।
ದ್ವಿಪಾವ್ಯಪಿ ಯೋಗೇಽಸ್ಮಿನ್ ಸಂಜಾತಾ ವಿಷಕನ್ಯಕಾ ॥**

**ಲಗ್ನೇ ಶನೈಶ್ಚರೋ ಯಸ್ಯಾಃ ಸುತೇರ್ಕೋ ನವಮೇ ಕುಜಃ ।
ವಿಷಾಖ್ಯಾ ಸಾಪಿ ನೋದ್ವಾಹ್ಯಾ ತ್ರಿವಿಧಾ ವಿಷಕನ್ಯಕಾ ॥**

**ಸಾವಿತ್ರ್ಯಾದಿ ವ್ರತಂ ಕೃತ್ವಾ ವೈಧವ್ಯವಿನಿವೃತ್ತಯೇ ।
ಅಶ್ವತ್ಥಾದಿಭಿರುದ್ವಾಹ್ಯ ದದ್ಯಾತ್ತಾಂ ಚಿರಜೀವಿನೇ ॥**

**ಬಾಲವೈಧವ್ಯಯೋಗೇ ತು ಕುಂಭದ್ರುಪ್ರತಿಮಾದಿಭಿಃ ।
ಕೃತ್ವಾ ಲಗ್ನಂ ರಹಃ ಪಶ್ಚಾತ್ ಕನ್ಯಾಮುದ್ವಾಹಯೇದಿತಿ ॥**

**ಸ್ವರ್ಣಾಂಬುಪಿಪ್ಪಲಾನಾಂ ಚ ಪ್ರತಿಮಾವಿಷ್ಣುರೂಪಿಣೇ ।
ತಯಾ ಸಹ ವಿವಾಹೇ ತು ಪುನರ್ಭೂತ್ವಂ ನ ಜಾಯತೇ ॥**

**ವಿವಾಹಾತ್ಪೂರ್ವಕಾಲೇ ತು ಚಂದ್ರತಾರಾಬಲಾನ್ವಿತೇ ।
ಕುಂಭಂ ಸಂಸ್ಥಾಪ್ಯ ವಿಧಿವತ್ ತತ್ರದ್ರುಪ್ರತಿಮಾಂ ಯಜೇತ್ ॥**

**ಮಧುಪರ್ಕಾದಿಕಂ ದತ್ವಾ ತದಗ್ರೇ ಕನ್ಯಕಾಂ ನಯೇತ್ ।
ವಿವಾಹೋಕ್ತೇನ ಮಂತ್ರೇಣ ಕುಂಭೇನ ಸಹ ಚೋದ್ವಹೇತ್ ॥**

**ಸೂತ್ರೇಣ ವೇಷ್ಟಯೇತ್ ಪಶ್ಚಾತ್ ದಶತಂತು ವಿಧಾನತಃ ।
ಕುಂಕುಮಾಲಂಕೃತಂ ದೇಹಂ ತಯೋರೇಕಾಂತಮಂದಿರೇ ॥**

**ತತಃ ಕುಂಭಂ ಚ ನಿಃಸಾರ್ಯ ಪ್ರಭಜ್ಯ ಸಲಿಲಾಶಯೇ ।
ತತೋಽಭಿಷೇಚಂ ಕುರ್ಯಾತ್ ಪಂಚಪಲ್ಲವವಾರಿಭಿಃ ।
ತತೋ ಅಲಂಕಾರವಸ್ತ್ರಾಭ್ಯಾಂ ವರಾಯ ಪ್ರತಿಪಾದಯೇತ್ ॥**

ಚಂದ್ರತಾರಾಬಲಾನ್ವಿತೇ ವಿವಾಹೋಕ್ತ ಶುಭದಿನೇ ಮಂಗಲಸ್ನಾತಾಂ ಕನ್ಯಾಂ ಸ್ವದಕ್ಷಿಣತಃ ಉಪವೇಶ್ಯ, ಸಪತ್ನೀಕಃ ಯಜಮಾನಃ ಸ್ವಸ್ತಿಪುಣ್ಯಾಹವಾಚನಾಭ್ಯುದಯಿಕೇ ಕೃತ್ವಾ ಗ್ರಹದೋಷಪರಿಹಾರಾರ್ಥಂ ನವಗ್ರಹಯಾಗಾರ್ಥಂ ಕಲಶಾರಾಧನಾರ್ಥಂ ಜಪಪಾರಾಯಣಾರ್ಥಂ ಚ ಶ್ರೋತ್ರಿಯಾನ್ ವೃಣುಯಾತ್ ।

ದೇಶಕಾಲೌ ಸಂಕೀರ್ತ್ಯ–

**........ಶುಭತಿಥೌ ಶಾಂತಿದೇವತಾತ್ಮಕಮಾಂಗಲ್ಯಮೂರ್ತಿಶ್ರೀಮಹಾವಿಷ್ಣುಪ್ರೇರಣಯಾ ಶ್ರೀಮಹಾವಿಷ್ಣುಪ್ರೀತ್ಯರ್ಥಂ ಮಮ ಕನ್ಯಾಯಾಃ ..........ನಕ್ಷತ್ರೇ ..........ರಾಶೌ ಜಾತಾಯಾಃ ..........ನಾಮ್ನ್ಯಾಃ ನಕ್ಷತ್ರಾದಿಯೋಗೇನ, ಗ್ರಹಯೋಗೇನ,**

**ಪುನರ್ಭೂದೋಷಭಾವೇನ ಚ, ವಿಷಾಖ್ಯಯೋಗಸಂಭವಬಾಲವೈಧವ್ಯಯೋಗಪರಿಹಾರಾರ್ಥಂ ಕುಂಭವಿವಾಹ-ಕರ್ಮಾಖ್ಯಂ ಕರಿಷ್ಯೇ ॥**

ಆಚಾರ್ಯಃ ಐಶಾನ್ಯದಿಶಿ ಚಕ್ರಾಬ್ಜಮಂಡಲಂ ರಚಯೇತ್ ।

**ಪದ್ಮಂ ವೃತ್ತತ್ರಯಂ ಚಕ್ರಂ ರಾಶಯೋ ವೀಥಿಕಾ ತಥಾ ।**
**ಶೋಭೋಪಶೋಭಿಕಾಶ್ಚೈವ ಚಕ್ರಾಬ್ಜಸ್ಯ ತು ಲಕ್ಷಣಮ್ ॥**

ಮಂಡಲೇ ದೇವತಾಃ ಆವಾಹ್ಯ, ಮಧ್ಯೇ ಧಾನ್ಯರಾಶೌ ಬೃಹಂತಂ ಮೃಣ್ಮಯಕುಂಭಂ ವಿಧಿವತ್ ಪ್ರತಿಷ್ಠಾಪಯೇತ್ ॥

**ತತ್ತ್ವಾಯಾಮಿ......** । ಇತಿ ವರುಣಂ ಆವಾಹ್ಯ ಪಂಚೋಪಚಾರೋಕ್ತಮುದ್ರಾಃ ಪ್ರದರ್ಶಯೇತ್ ।

**ಓಂ ಲಂ ಪೃಥಿವ್ಯಾತ್ಮನೇ ಗಂಧಂ ಕಲ್ಪಯಾಮಿ ॥** ಅಂಗುಷ್ಠಾಗ್ರಂ ಕನಿಷ್ಠಾಮಧ್ಯಪರ್ವಣಿ ಸಂಸ್ಪೃಶ್ಯ-

**ಓಂ ಹಂ ಆಕಾಶಾತ್ಮನೇ ಪುಷ್ಪಂ ಕಲ್ಪಯಾಮಿ ॥** ತರ್ಜನ್ಯಗ್ರಂ ಅಂಗುಷ್ಠಮಧ್ಯಪರ್ವಣಿ ಸಂಸ್ಪೃಶ್ಯ-

**ಓಂ ಯಂ ವಾಯ್ವಾತ್ಮನೇ ಧೂಪಂ ಕಲ್ಪಯಾಮಿ ॥** ಅಂಗುಷ್ಠಾಗ್ರಂ ತರ್ಜನೀಮಧ್ಯಪರ್ವಣಿ ಸಂಸ್ಪೃಶ್ಯ-

**ಓಂ ರಂ ಅಗ್ನ್ಯಾತ್ಮನೇ ದೀಪಂ ಕಲ್ಪಯಾಮಿ ॥** ಅಂಗುಷ್ಠಾಗ್ರಂ ಮಧ್ಯಮಾಮಧ್ಯಪರ್ವಣಿ ಸಂಸ್ಪೃಶ್ಯ-

**ಓಂ ವಂ ಅಮೃತಾತ್ಮನೇ ನೈವೇದ್ಯಂ ಕಲ್ಪಯಾಮಿ ॥** ಅಂಗುಷ್ಠಾಗ್ರಂ ಅನಾಮಿಕಾಮಧ್ಯಪರ್ವಣಿ ಸಂಸ್ಪೃಶ್ಯ-

ತತಃ ಸಪರಿವಾರಃ ಯಜಮಾನಃ ಪ್ರಾರ್ಥಯೇತ್ ॥

**ವರುಣಾಂಗಸ್ವರೂಪಾಯ ಜೀವನಾನಾಂ ಸಮಾಶ್ರಯ ।**
**ಪತಿಂ ಜೀವಯ ಕನ್ಯಾಯಾಶ್ಚಿರಂ ಪುತ್ರಂ ಸುಖಂ ಕುರು ॥**
**ದೇಹಿವಿಷ್ಣೋ ವರಂ ದೇವ ಕನ್ಯಾಂ ಪಾಲಯ ದುಃಖತಃ ।**

ತತಃ ಸುವರ್ಣನಿರ್ಮಿತಾಂ ವಿಷ್ಣುರೂಪ ಅಶ್ವತ್ಥದ್ರುಮಪ್ರತಿಮಾಂ ಪಂಚಗವ್ಯೇನ ಸಂಶೋಧ್ಯ ಅಗ್ನ್ಯುತ್ತಾರಣ-ಪೂರ್ವಕ ಶುದ್ಧಿಂ ಕುರ್ಯಾತ್ (ಪು. ಸಂಖ್ಯೆ. ೨೮೧) ॥

**ಇದಂ ವಿಷ್ಣುರ್ಮೇಧಾತಿಥಿರ್ವಿಷ್ಣುರ್ಗಾಯತ್ರೀ । ವಿಷ್ಣೋಃ ಆವಾಹನೇ ವಿನಿಯೋಗಃ ॥ ಓಂ ಇದಂ ವಿಷ್ಣುಃ...... ಪಾಂಸುರೇ ॥ ಓಂ ಭೂಃ ವಿಷ್ಣುಂ ಆವಾಹಯಾಮಿ । ಓಂ ಭುವಃ ವಿಷ್ಣುಮ್ ಆವಾಹಯಾಮಿ । ಓಂ ಸುವಃ ವಿಷ್ಣುಮ್ ಆವಾಹಯಾಮಿ । ಓಂ ಭೂರ್ಭುವಃಸ್ವಃ ವಿಷ್ಣುಮ್ ಆವಾಹಯಾಮಿ ॥ ಸ್ಥಾಪಯಾಮಿ । ಪೂಜಯಾಮಿ ॥**

ಅಂತರ್ಯಾಮೀ ಋಷಿಃ । ದೈವೀಗಾಯತ್ರೀ ಛಂದಃ । ನಾರಾಯಣೋ ದೇವತಾ ॥

ಓಂ **ಕ್ರುದ್ಧೋಲ್ಕಾದಿ ಷಡಂಗಃ ॥**

**ಧ್ಯಾನಮ್**

**ವಿಷ್ಣುಂ ಶಾರದಚಂದ್ರಕೋಟಿಸದೃಶಂ ಶಂಖಂ ರಥಾಂಗಂ ಗದಾಂ-**
**ಭೋಜಂ ದಧತಂ ಸಿತಾಬ್ಜನಿಲಯಂ ಕಾಂತ್ಯಾ ಜಗನ್ಮೋಹನಮ್ ।**
**ಆಬದ್ಧಾಂಗದಹಾರಕುಂಡಲಮಹಾಮೌಲಿಂ ಸ್ಫುರತ್ಕಂಕಣಂ**
**ಶ್ರೀವತ್ಸಾಂಕಮುದಾರಕೌಸ್ತುಭಧರಂ ವಂದೇ ಮುನೀಂದ್ರೈಃ ಸ್ತುತಮ್ ॥**

**ಉದ್ಯದ್ಭಾಸ್ವತ್.......... ನಮೋಽಸ್ತು ತೇ ॥**

**ಓಂ ಓಂ ನಮೋ ನಾರಾಯಣಾಯ ಓಮ್** । ಇತಿ ೮ ವಾರಂ ಜಪಿತ್ವಾ ತತ್ತ್ವನ್ಯಾಸಂ ಮಾತೃಕಾನ್ಯಾಸಂ ಚ ಕೃತ್ವಾ ಅರ್ಘ್ಯಾದ್ಯುಪಚಾರೈಃ ಪೂಜಯೇತ್ ॥ ತತಃ ವಿಷ್ಣುಸೂಕ್ತೈಃ ವಿಷ್ಣುನಾಮಾವಲಿಭಿಃ ಪುಷ್ಪೈಃ ಅರ್ಚಯೇತ್। ಧೂಪದೀಪೌ ಪ್ರದರ್ಶ್ಯ, ನೈವೇದ್ಯಾರ್ಥೇ ಪಾಯಸಂ ನಿವೇದಯೇತ್ । ಸರ್ವಾಂಗುಲಿಭಿಃ ಸಮಾನಾಹುತಿಃ । ತತಃ ನೈವೇದ್ಯಂ ವಿಸೃಜ್ಯ ನೀರಾಜಯೇತ್ । ಯಜಮಾನಃ ಕನ್ಯಾಂ ಕಲಶಪುರತಃ ಉಪವೇಶ್ಯ ದೇಶಕಾಲೌ ಸಂಕೀರ್ತ್ಯ-

**..........ಶುಭತಿಥೌ ಮಾಂಗಲ್ಯಮೂರ್ತಿಶ್ರೀಮಹಾವಿಷ್ಣುಪ್ರೇರಣಯಾ ಶ್ರೀಮಹಾವಿಷ್ಣುಪ್ರೀತ್ಯರ್ಥಂ .......... ಗೋತ್ರೋದ್ಭವಃ ..........ಶರ್ಮಾಹಂ ಮಮ ಕನ್ಯಾಂ ..........ನಕ್ಷತ್ರೇ ..........ರಾಶೌ ಜಾತಾಂ ..........ನಾಮ್ನೀಂ ಶ್ರೀರೂಪಿಣೀಂ ಕುಂಭಾತ್ಮಕಾಯ ಮಹಾವಿಷ್ಣುರೂಪಿಣೇ ಸಮರ್ಪಯಾಮಿ** ॥ ಕನ್ಯಾಂ ಉತ್ಥಾಪ್ಯ ಮಾಲಾದ್ವಯಂ ದತ್ತ್ವಾ ಅಂತಃಪಟಂ ಕನ್ಯಾಕುಂಭಾಂತರಾಲೇ ಧೃತ್ವಾ ಮಂಗಳಪದ್ಯಾಷ್ಟಕಂ ಪಠಿತ್ವಾ ಸ್ವಯಂ ಪುಷ್ಪಾಣಿ ಗೃಹೀತ್ವಾ-

**ದೇವ ದೇವ ಜಗನ್ನಾಥ ಜಗದಾನಂದಕಾರಕ ।**
**ದಾಸ್ಯಾಮಿ ವಿಷ್ಣವೇ ತುಭ್ಯಂ ಮಮ ಕನ್ಯಾಂ ವಿಧಾನತಃ ॥**
**ದೇಹಿ ವಿಷ್ಣೋ ವರಂ ದೇವ ಕನ್ಯಾಂ ಪಾಲಯ ದುಃಖತಃ ।**
**ಅವೈಧವ್ಯಂ ಸುಮಾಂಗಲ್ಯಂ ದೀರ್ಘಾಯುಃ ಶ್ರೀಸುಖಾಪ್ತಯೇ ॥**

ಇತಿ ಪ್ರಾರ್ಥ್ಯ ಪುಷ್ಪಾಣಿ ಸಮರ್ಪ್ಯ ಪ್ರಣಮೇತ್ । ಕನ್ಯಾ ತು ಮಾಲಾದ್ವಯಂ ಕಲಶೋಪರಿ ಆರೋಪ್ಯ ಏಕಾಂಮಾಲಾಂ ಸ್ವಶಿರಸಿ ಧೃತ್ವಾ ಚತುಃ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಉಪವಿಶೇತ್ ॥

ಆಚಾರ್ಯಃ ಮಂಗಲಸೂತ್ರಪಾದಾಂಗುಲೀಯಕಂ ಕಲಶಮೂಲೇ ಸಂಸ್ಥಾಪ್ಯ, ಹರಿದ್ರೋದಕಾಕ್ತಶ್ವೇತಸೂತ್ರಂ ಕುಂಭಂ ಕನ್ಯಾಂ ಚ ಅಧಸ್ತಾತ್ ಉಪರಿ ಪ್ರತ್ಯೇಕಂ ಪ್ರತ್ಯೇಕಮ್-

**ಓಂ ಪರಿ ತ್ವಾ ಗಿರ್ವಣೋ ಗಿರ ಇಮಾ ಭವಂತು ವಿಶ್ವತಃ । ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ॥**

ಇತಿ ಮಂತ್ರೇಣ ತ್ರಿರಾವರ್ತ್ಯ ಸಂವೇಷ್ಟ್ಯ ನಿಷ್ಕಾಸ್ಯ ದ್ವಯೋಃ ಹರಿದ್ರಾಖಂಡಂ ಆಬದ್ಧ್ಯ ಏಕಂ ಕಲಶಕಂಠೇ ಕನ್ಯಾ ಬಧ್ನೀಯಾತ್ । ಕನ್ಯಾಯಾಃ ವಾಮಹಸ್ತೇ ಅನ್ಯಾ ಸುವಾಸಿನೀ ಆಬಧ್ಯ ಆಚಾರ್ಯಃ ಮಂಗಲಸೂತ್ರಂ ಪಾದಾಂಗುಲೀಯಕಂ ಚ ಕನ್ಯಾಯಾಃ ಅಂಶುಕಾಂಚಲೇ ಪ್ರಕ್ಷಿಪೇತ್ । ಸಾ ತತ್ರೈವ ಬಧ್ನೀಯಾತ್ । ಕುಂಭಸ್ಥ ವಿಷ್ಣವೇ ಕನ್ಯಾಂ ಸಮರ್ಪಯೇತ್ । ಮಂತ್ರಸ್ತು:

**ಗೌರೀಂ ಕನ್ಯಾಂ ಇಮಾಂ ಶ್ಲಕ್ಷ್ಣಾಂ ಯಥಾಶಕ್ತಿ ವಿಭೂಷಿತಾಮ್ ।**
**ದದಾಮಿ ವಿಷ್ಣವೇ ತುಭ್ಯಂ ಸೌಭಾಗ್ಯಂ ದೇಹಿ ಸರ್ವದಾ ॥**

ವಿಷ್ಣುರೂಪಿಣೇ ಅಶ್ವತ್ಥಕುಂಭಾಯ ಇಮಾಂ ಕನ್ಯಾಂ ಶ್ರೀರೂಪಿಣೀಂ ಸಂಪ್ರದದೇ ಇತಿ ಸಮರ್ಪಯೇತ್। ಕನ್ಯಾ ಅಷ್ಟಾವಿಂಶತಿನಾಮಭಿಃ ಪುಷ್ಪೈಃ ಕಲಶಂ ಅರ್ಚಯೇತ್ ॥

| | | |
|---|---|---|
| **ಶ್ರೀಮತ್ಸ್ಯಾಯ ನಮಃ ।** | **ಶ್ರೀಸಹಸ್ರಾಕ್ಷಾಯ ನಮಃ ।** | **ಶ್ರೀನಾರಾಯಣಾಯ ನಮಃ ।** |
| **ಶ್ರೀಕೂರ್ಮಾಯ ನಮಃ ।** | **ಶ್ರೀವನಮಾಲಿನೇ ನಮಃ ।** | **ಶ್ರೀಹರಯೇ ನಮಃ ।** |
| **ಶ್ರೀವರಾಹಾಯ ನಮಃ ।** | **ಶ್ರೀಹಲಾಯುಧಾಯ ನಮಃ ।** | **ಶ್ರೀದಾಮೋದರಾಯ ನಮಃ ।** |
| **ಶ್ರೀವಾಮನಾಯ ನಮಃ ।** | **ಶ್ರೀಗೋವರ್ಧನಾಯ ನಮಃ ।** | **ಶ್ರೀಶ್ರೀಧರಾಯ ನಮಃ ।** |

ಶ್ರೀಜನಾರ್ದನಾಯ ನಮಃ ।
ಶ್ರೀಗೋವಿಂದಾಯ ನಮಃ ।
ಶ್ರೀಪುಂಡರೀಕಾಕ್ಷಾಯ ನಮಃ ।
ಶ್ರೀಮಾಧವಾಯ ನಮಃ ।
ಶ್ರೀಮಧುಸೂದನಾಯ ನಮಃ ।
ಶ್ರೀಪದ್ಮನಾಭಾಯ ನಮಃ ।
ಶ್ರೀಹೃಷೀಕೇಶಾಯ ನಮಃ ।
ಶ್ರೀವೈಕುಂಠಾಯ ನಮಃ ।
ಶ್ರೀಪುರುಷೋತ್ತಮಾಯ ನಮಃ ।
ಶ್ರೀವಿಶ್ವರೂಪಾಯ ನಮಃ ।
ಶ್ರೀವಾಸುದೇವಾಯ ನಮಃ ।
ಶ್ರೀರಾಮಾಯ ನಮಃ ।
ಶ್ರೀವೇದಾಂಗಾಯ ನಮಃ ।
ಶ್ರೀಗರುಡಧ್ವಜಾಯ ನಮಃ ।
ಶ್ರೀಅನಂತಾಯ ನಮಃ ।
ಶ್ರೀಗೋಪಾಲಕೃಷ್ಣಾಯ ನಮಃ ।

ಇತಿ ಅಭ್ಯರ್ಚ್ಯ ಪ್ರದಕ್ಷಿಣೀಕೃತ್ಯ ನಮಸ್ಕುರ್ಯಾತ್ ॥

ತತೋ ವೇಷ್ಟಿತ ಸೂತ್ರಾತ್ ಕುಂಭಂ ನಿಸ್ಸಾರ್ಯ ಮೃತ್‌ಕುಂಭಂ ಉದ್ಧೃತ್ಯ ಜಲಾಶಯಂ ಗತ್ವಾ ವಿಭಜೇತ್। ತತಃ ಸಚೇಲಂ ಸ್ನಾತ್ವಾ ನೂತನವಸ್ತ್ರಾದಿಕಂ ಧೃತ್ವಾ ಪೂಜಾಸ್ಥಲೇ ಉಪವಿಶೇತ್ ॥

ತತೋಽಆಚಾರ್ಯಃ ಕಲಶಮೇಕಂ ಪ್ರತಿಷ್ಠಾಪ್ಯ, ಐಂದ್ರವಾರುಣಪಾವಮಾನೀಯಸೂಕ್ತಾನಿ ಪಠಿತ್ವಾ, ಕನ್ಯಾಂ **ಸಮುದ್ರಜ್ಯೇಷ್ಠಾದಿ ಚತಸೃಭಿಃ** (ಪು. ಸಂಖ್ಯೆ ೩೮೯), **ಆನೋಭದ್ರೇತಿ ದಶಋಗ್ಭಿಃ** (ಪು. ಸಂಖ್ಯೆ ೬೭೫ ,) **ಪರೋ ಮಾತ್ರಯೇತಿ ಸಪ್ತಋಗ್ಭಿಃ** (ಪು.ಸಂಖ್ಯೆ ೧೧೧), **ಮುಂಚಾಮಿತ್ವೇತಿ ಪಂಚಋಗ್ಭಿಃ** (ಪು.ಸಂಖ್ಯೆ ೩೯೧ ), **ಸುರಾಸ್ತ್ವಾಮಿತಿ ಪುರಾಣಶ್ಲೋಕೈಶ್ಚ** (ಪು ಸಂಖ್ಯೆ. ೩೯೫), ಪಂಚಪಲ್ಲವೈಃ ಅಭಿಷಿಂಚೇತ್ ॥ ಕನ್ಯಾ ಮಂಗಲಸೂತ್ರಂ ಪಾದಾಂಗುಲೀಯಕಂ ಚ ಸುವಾಸಿನ್ಯೈ ಉಪಾಯನದಾನರೂಪೇಣ ದದ್ಯಾತ್ । ಯಜಮಾನಃ ಸವಸ್ತ್ರಪ್ರತಿಮಾಸಹಿತಂ ಕಲಶಂ ಆಚಾರ್ಯಾಯ ದತ್ವಾ ಋತ್ವಿಗ್ಭ್ಯಶ್ಚ ಭೂಯಸೀಂ ದಕ್ಷಿಣಾದಿಕಂ ದತ್ವಾ ಆಶಿಷಃ ಗೃಹ್ಣೀಯಾತ್ ॥ **ಅನಘಾದ್ಯಾಹಮಸ್ಮಿ** ಇತಿ ತ್ರಿವಾರಂ ಕನ್ಯಾ ವದೇತ್ । **ಏವಮಸ್ತು** ಇತಿ ದ್ವಿಜೋ ಬ್ರೂಯಾತ್ । ತತಃ ಭೋಜಯೇತ್ ॥

॥ ಇತಿ ಕುಂಭವಿವಾಹಪ್ರಯೋಗಃ ॥



## ಬಾಲವೈಧವ್ಯಹರ ವಿಷ್ಣುಕಲ್ಪೋಕ್ತಪೂಜಾ

ಬ್ರಾಹ್ಮಣಂ ಸಾಧುಮಾಮಂತ್ರ್ಯ ಸಂಪೂಜ್ಯ ವಿವಿಧಾರ್ಹಣೈಃ ।
ತಸ್ಮೈ ದದ್ಯಾದ್ವಿಧಾನೇನ ವಿಷ್ಣೋರ್ಮೂರ್ತಿಂ ಚತುರ್ಭುಜಾಮ್ ॥

ಶುದ್ಧವರ್ಣ ಸುವರ್ಣೇನ ಪಲೈಕಾಂ ಚ ಸುಲಕ್ಷಣಾಮ್ ।
ತದರ್ಧೇನ ತದರ್ಧೇನ ವಿತ್ತಶಕ್ತ್ಯಾನುಸಾರತಃ ॥

ನಿರ್ಮಿತಾಂ ರುಚಿರಾಂ ಶಂಖಗದಾಚಕ್ರಾಬ್ಜಸಂಯುತಾಮ್ ।
ದಧಾನಾಂ ವಾಸಸೀಪೀತೇ ಕುಮುದೋತ್ಪಲಮಾಲಿಕಾಮ್ ॥

ಸದಕ್ಷಿಣಾಂ ಚ ತಾಂ ದದ್ಯಾತ್ ಮಂತ್ರಮೇತಮುದೀರಯೇತ್ ।
ಭಗವನ್ ಕಮಲಾಕಾಂತ ಸರ್ವಮಂಗಲದಾಯಕ ॥

**ಹತ್ವಾ ಸರ್ವಾಣ್ಯರಿಷ್ಟಾನಿ ಸೌಭಾಗ್ಯಂ ಚಾಭಿವರ್ಧಯ ।**
**ಯನ್ಮಯಾ ಪ್ರಾಪ್ಯದನುಪಿ ಕ್ಷಿಂತ್ಯಾಪತಿಸಮಾಗಮಮ್ ॥**

**ವಿಷೋಪವಿಷಶಸ್ತ್ರಾದ್ಯೈಃ ಹತೋ ವಾತಿಸುರಕ್ತಯಾ ।**
**ಪ್ರಾಪ್ಯಮಾಣಂ ಮಹಾಘೋರಂ ಯಶಸ್ಸೌಖ್ಯಧನಾಪಹಮ್ ॥**

**ವೈಧವ್ಯಾದ್ಯತಿದುಃಖೌಘನಾಶಾಯ ಸುಖಲಬ್ಧಯೇ ।**
**ಬಹುಸೌಭಾಗ್ಯದಾತ್ರೀಂ ಚ ಮಹಾವಿಷ್ಣೋರಿಮಾಂ ತನುಮ್ ।**
**ಸೌವರ್ಣೀಂ ಪ್ರತಿಮಾಂ ಶಕ್ತ್ಯಾ ತುಭ್ಯಂ ಸಂಪ್ರದದೇ ದ್ವಿಜ ॥** ॥ ಇತಿ ನಾರದೋಕ್ತಿಃ ।

**ಪ್ರಯೋಗಃ** – ಸಪತ್ನೀಕ ಯಜಮಾನಃ ದ್ವಿರಾಚಮ್ಯ, ಬ್ರಾಹ್ಮಣ ಹಸ್ತಾತ್ ಪವಿತ್ರಂ ಸ್ವೀಕೃತ್ಯ, ಆಸನ ಪ್ರಾಣಾಯಾಮಾದಿಕಂ ಕೃತ್ವಾ, **ದೇಶಕಾಲೌ ಸಂಕೀರ್ತ್ಯ, ಮಮಾಸ್ಯಾಃ ಕುಮಾರ್ಯಾಃ ಲಗ್ನವಶಾತ್, ಚಂದ್ರಲಗ್ನವಶಾತ್, ಶುಕ್ರವಶಾತ್ ದ್ವಿತೀಯ ಸಪ್ತಮ ಅಷ್ಟಮ ಚತುರ್ಥ ವ್ಯಯಸ್ಥಾನ ಸ್ಥಿತ ಪಾಪಗ್ರಹಾಣಾಂ ದೋಷನಿವೃತ್ತ್ಯರ್ಥಂ, ಸಪ್ತಮಾಷ್ಟಮಭಾವಸ್ಥ ಪಾಪಕರ್ತರೀಯೋಗ ಪಾಪದೃಕ್ಯೋಗಾದಿ ದೋಷಕ್ಷಯಾರ್ಥಂ, ವಿಶೇಷತಃ ಸಪ್ತಮಾಷ್ಟಮಭಾವೇ ಸ್ತ್ರೀಜಾತಕಸ್ಥ ಅಂಗಾರಕಗ್ರಹ ಸೂಚಿತ ವೈಧವ್ಯಾದಿದೋಷಪರಿಹಾರಾರ್ಥಂ (ದ್ವಿಭಾರ್ಯಾಯೋಗ, ದ್ವಿಪತಿತ್ವಯೋಗಾದಿ ಅನಿಷ್ಟಯೋಗನಿವೃತ್ತ್ಯರ್ಥಂ, ವಿಷಕನ್ಯಾದೋಷ ಉಪಶಮನಾರ್ಥಂ, ಜನ್ಮಾಂತರೇ ವಿಷೋಪವಿಷಶಸ್ತ್ರಾದ್ಯೈಃ ಭರ್ತೃಹತ್ಯಾದಿ ದೋಷಸೂಚಿತ ಇಹಜನ್ಮನಿ ಪ್ರಾಪ್ಯಮಾನ ಮಹಾಘೋರ ಯಶಃ ಸೌಖ್ಯ ಧನ ನಷ್ಟಾದಿ ವೈಧವ್ಯಾದಿ ಅತಿದುಃಖಾದಿ ನಿವೃತ್ತಿದ್ವಾರಾ ಸುಖಪ್ರಾಪ್ತ್ಯರ್ಥಂ, ವಿವಾಹಾನಂತರಂ ಆರೋಗ್ಯಪೂರ್ಣ ಆಯುಷ್ಯ ಅಭಿವೃದ್ಧಿ ದಾಂಪತ್ಯಸುಖಪ್ರಾಪ್ತಿದ್ವಾರಾ ಆಯುಷ್ಮತ್ತ್ವರೂಪ ಸುಗುಣಾನೇಕ ಸುಪುತ್ರಾವಾಪ್ತ್ಯರ್ಥಂ, ನಿತ್ಯ ಮುಕ್ತಸ್ಯ ನಿತ್ಯಮಂಗಲಸ್ಯ ಜಗತ್‌ಪಿತುಃ ಲಕ್ಷ್ಮೀನಾರಾಯಣಾತ್ಮಕ ಮಹಾವಿಷ್ಣೋಃ ಪೂಜನಂ ಕರಿಷ್ಯೇ ॥**

ಶರೀರ ಶುದ್ಧ್ಯರ್ಥಂ ತತ್ತ್ವನ್ಯಾಸ–ಮಾತೃಕಾನ್ಯಾಸೌ ವಿಧಾಯ, ಕರ್ಮಾಧಿಕಾರಸಿದ್ಧ್ಯರ್ಥಂ ಅಷ್ಟಾಕ್ಷರಮಂತ್ರಂ ಲಕ್ಷ್ಮೀಮಂತ್ರಂ ಚ ಜಪಪೂರ್ವಕ ನ್ಯಾಸಾದಿಕಂ ಕೃತ್ವಾ, ಘಂಟಾನಾದಪುರಸ್ಸರಂ ಶಂಖಪೂಜನಂ ಗುರುಗಣೇಶಪೂಜಾಂ ಚ ಸಮಾಪ್ಯ, ಚಕ್ರಾಬ್ಜಮಂಡಲೇ ಕಲಶಂ ಪ್ರತಿಷ್ಠಾಪ್ಯ, ಅಜಾದಿ ಶಿಂಶುಮಾರಾಂತ ಶತಕಲಾಃ ಆವಾಹ್ಯ ಪೂಜಯೇತ್ । ಕಲಶೋಪರಿ ಅಗ್ನ್ಯುತ್ತಾರಣಾದಿ ಶುದ್ಧೀಕೃತ ಲಕ್ಷ್ಮೀನಾರಾಯಣಪ್ರತಿಮಾಂ ನಿಧಾಯ, ಪೀಠ ಪೂಜಾಂ ಕೃತ್ವಾ, ಲಕ್ಷ್ಮೀನಾರಾಯಣೌ ಆವಾಹಯೇತ್ ॥ (ಹೋಮಪಕ್ಷೇ ಅಷ್ಟಾಕ್ಷರೇಣ ೧೦೮ ವಾರಂ ಆಜ್ಯದ್ರವ್ಯೇಣ ಮಹಾವಿಷ್ಣುಂ ವಿಷ್ಣುಷಡಕ್ಷರಮಂತ್ರೇಣ ೧೦೮ (೧೦೦೮) ವಾರಂ ಪರಮಾನ್ನದ್ರವ್ಯೇಣ ಲಕ್ಷ್ಮೀಂ ೨೮ ವಾರಂ ಪರಮಾನ್ನದ್ರವ್ಯೇಣ ಶ್ರೀಸೂಕ್ತಪುರುಷಸೂಕ್ತ ಮಂತ್ರೈಶ್ಚ ಏಕೈಕವಾರಂ ಆಜ್ಯದ್ರವ್ಯೇಣ ಹೋಮಯೇತ್ ।)

**ಕಲ್ಪೋಕ್ತಪೂಜಾ :** [ಕುಸುಮಾಕ್ಷತಾನ್ ಗೃಹೀತ್ವಾ] ಸಹಸ್ರಶೀರ್ಷೇತಿ ಮಂತ್ರಸ್ಯ ನಾರಾಯಣಋಷಿಃ । ಅನುಷ್ಟುಪ್ ಛಂದಃ । ಪರಮಪುರುಷೋದೇವತಾ । ಪ್ರಧಾನದೇವತಾವಾಹನೇ ವಿನಿಯೋಗಃ ॥

ಓಮ್ ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ ಸ್ವಾಸೀನಮಸ್ಯ ನುತಿನಿತ್ಯವಚಃ ಪ್ರವೃತ್ತಿಮ್ । ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥

**ಓಂ ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।**

**ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿವಾಚಿ ॥**

**ಓಂ ಸಹಸ್ರಶೀರ್ಷಾ ಪುರುಷಃ.........ವೃತ್ವಾತ್ಯತಿಷ್ಠದ್ದಶಾಂಗುಲಮ್ ॥**

ಭಾರತೀರಮಣಮುಖ್ಯಪ್ರಾಣಾಂತರ್ಗತಲಕ್ಷ್ಮೀನಾರಾಯಣಂ ಕಲಶಸ್ಥಸ್ವರ್ಣಪ್ರತಿಮಾಯಾಂ ಸೂರ್ಯ-ಮಂಡಲಾತ್ ಪೂಜಾರ್ಥೇ ಆವಾಹಯಿಷ್ಯೇ ॥ ಆವಾಹಿತೋ ಭವ । ಸಂಸ್ಥಾಪಿತೋ ಭವ । ಸನ್ನಿಹಿತೋ ಭವ । ಸನ್ನಿರುದ್ಧೋ ಭವ । ಸಮ್ಮುಖೋ ಭವ । ಅವಗುಂಠಿತೋ ಭವ । ಸುಪ್ರಸನ್ನೋ ಭವ ॥ (ಇತ್ಯುಚ್ಚಾರ್ಯ ಆವಾಹನಾದಿ ಷಣ್ಮುದ್ರಾಃ ಪ್ರದರ್ಶ್ಯ ಕುಸುಮಾಕ್ಷತಾನ್ ಸಮರ್ಪಯೇತ್ ।)

**ಚತುರ್ಭುಜಾಂ ಜಗದ್ಧಾತ್ರೀಂ ವನಮಾಲಾವಿಭೂಷಿತಾಮ್ ।**
**ಸಿಂಹಾಸನಸಮಾಯುಕ್ತಾಂ ಲಕ್ಷ್ಮೀಂ ಧ್ಯಾಯೇಽಂಬಿಕಾಮಹಮ್ ॥**

ಅಸುನೀತ ಇತಿ ಪುನರ್ನ ಇತಿ ದ್ವಯೋಃ ಗೋಪಾಯನಾಃ ಬಂಧುಃ ಶ್ರುತಬಂಧುಃ ವಿಪ್ರಬಂಧುಶ್ಚ ಋಷಯಃ । ತ್ರಿಷ್ಟುಪ್ಛಂದಃ । ಆದ್ಯಾಯಾಃ ಅಸುನೀತಿಃ, ದ್ವಿತೀಯಾಯಾಃ ಪೃಥಿವೀ-ದ್ಯ್ವಂತರಿಕ್ಷ-ಸೋಮ-ಪೂಷ-ಪಥ್ಯಾಸ್ವಸ್ತಯಃ ದೇವತಾಃ । ಪ್ರಾಣಪ್ರತಿಷ್ಠಾಪನೇ ವಿನಿಯೋಗಃ ॥

**ಓಮ್ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್ । ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ॥ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್ । ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾ (ಅ)ಿ೦ ಯಾ ಸ್ವಸ್ತಿಃ ॥**

ತದಸ್ತು ಮಿತ್ರಾವರುಣಾ ಇತ್ಯಸ್ಯ, ಆತ್ರೇಯಃ ಪ್ರತಿರಥಃ ಋಷಿಃ । ತ್ರಿಷ್ಟುಪ್ಛಂದಃ । ದೇವತಾಪ್ರತಿಷ್ಠಾಪನೇ ವಿನಿಯೋಗಃ ॥

**ಓಂ ತದಸ್ತು ಮಿತ್ರಾವರುಣಾ ತದಗ್ನೇ ಶಂ ಯೋರಸ್ಮಭ್ಯಮಿದಮಸ್ತು ಶಸ್ತಮ್ । ಅಶೀಮಹಿ ಗಾಧಮುತ ಪ್ರತಿಷ್ಠಾಂ ನಮೋ ದಿವೇ ಬೃಹತೇ ಸಾದನಾಯ ॥ ಓಮ್ ॥**

ಗೃಹಾ ವೈ ಪ್ರತಿಷ್ಠಾ ಸೂಕ್ತಂ ತತ್ ಪ್ರತಿಷ್ಠಿತತಮಯಾ ವಾಚಾ ಶಂಸ್ತವ್ಯಂ ತಸ್ಮಾದ್ಯದಪಿ ದೂರ ಇವ ಪಶೂಲ್ಲಭತೇ ಗೃಹಾನೇವೈ ನಾನಾಜಿಗಮಿಷತಿ ಗೃಹಾಹಿ ಪಶೂನಾಂ ಪ್ರತಿಷ್ಠಾ ಪ್ರತಿಷ್ಠಾ ॥ ಸುಪ್ರತಿಷ್ಠಿತಮಸ್ತು ॥
ಓಂ ಓಂ ನಮೋ ನಾರಾಯಣಾಯ ಓಂ (ಇತಿ ಅಷ್ಟವಾರಂ ಜಪೇತ್)

ಭೋಃ ಸ್ವಾಮಿನ್ ಜಗತಾಂ ನಾಥ ಯಾವತ್ ಪೂಜಾವಸಾನಕಮ್ । ತಾವತ್ ಸಂಪ್ರೀತಿಭಾವೇನ ಬಿಂಬೇಽಸ್ಮಿನ್ ಸಂಸ್ಥಿತೋ ಭವ ॥

ಆವಾಹಿತದೇವತಾಭ್ಯೋ ನಮಃ । ಪುರುಷಸೂಕ್ತ, ಶ್ರೀಸೂಕ್ತ, ಪುರಾಣಮಂತ್ರೈಶ್ಚ ಕಲ್ಪೋಕ್ತ ಪೂಜಾಖ್ಯಂ ಕರ್ಮ ಕರಿಷ್ಯೇ ॥

ಸಹಸ್ರಶೀರ್ಷೇತಿ ಷೋಡಶರ್ಚಸ್ಯ ಸೂಕ್ತಸ್ಯ ನಾರಾಯಣಋಷಿಃ । ಅನುಷ್ಟುಪ್‌ಛಂದಃ । ಅಂತ್ಯಾ ತ್ರಿಷ್ಟುಪ್ । ಪುರುಷೋದೇವತಾ ।

ಹಿರಣ್ಯವರ್ಣಾಮಿತಿ ಪಂಚದಶರ್ಚಸ್ಯ ಸೂಕ್ತಸ್ಯ ಆನಂದಕರ್ದಮಶ್ರೀದ ಚಿಕ್ಲೀತೇಂದಿರಾ ಸುತಾ ಋಷಯಃ ।

ಆದ್ಯಾಸ್ತಿಸ್ರೋಽನುಷ್ಟುಭಃ । ಚತುರ್ಥೀ ಬೃಹತೀ । ಪಂಚಮೀಷಷ್ಠ್ಯೌ ತ್ರಿಷ್ಟುಭೌ । ತತೋಽಷ್ಟಾವನುಷ್ಟುಭಃ । ಅಂತ್ಯಾ ಪ್ರಸ್ತಾರಪಂಕ್ತಿಃ । ಶ್ರೀರಗ್ನಿಶ್ಚೇತ್ಯುಭೇ ದೇವತೇ ॥

**ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ ॥ ೧ ॥**

**ಓಂ । ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಮ್ । ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥ ೧ ॥**

ಸಪ್ತಸೌವರ್ಣಪಾತ್ರಸ್ಥೈರ್ಜಲೈರ್ಗಂಧೋದಕೈಃ ಶುಭೈಃ ।
ಅರ್ಘ್ಯಂ ದದಾಮಿ ತೇ ಮಾತಃ ಸ್ವೀಕುರುಷ್ವ ಹರಿಪ್ರಿಯೇ ।

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಅರ್ಘ್ಯಂ ಸಮರ್ಪಯಾಮಿ ॥

**ಓಂ ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ । ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥**

**ಓಂ ತಾಂ ಮ ಆ ವಹ ಜಾತವೇದೋ ಲಕ್ಷ್ಮೀಮನಪಗಾಮಿನೀಮ್ । ಯಸ್ಯಾಂ ಹಿರಣ್ಯಂ ವಿಂದೇಯಂ ಗಾಮಶ್ವಂ ಪುರುಷಾನಹಮ್ ॥ ೨ ॥**

ಕ್ಷೀರೋದಾರ್ಣವಸಂಭೂತೇ ಲಕ್ಷ್ಮೀಶ್ಚಂದ್ರಸಹೋದರಿ ।
ಪಾದ್ಯಂ ಗೃಹಾಣ ದೇವೇಶಿ ವರದೇ ಭಕ್ತವತ್ಸಲೇ ॥

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಪಾದ್ಯಂ ಸಮರ್ಪಯಾಮಿ ॥

**ಓಮ್ ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ । ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥**

**ಓಮ್ ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದಪ್ರಮೋದಿನೀಮ್ । ಶ್ರಿಯಂ ದೇವೀಮುಪ ಹ್ವಯೇ ಶ್ರೀರ್ಮಾ ದೇವೀ ಜುಷತಾಮ್ ॥ ೩ ॥**

ಗಂಗಾಜಲಂ ಸಮಾನಿತಂ ಸುವರ್ಣಕಲಶೇ ಸ್ಥಿತಮ್ ।
ಆಚಮ್ಯತಾಂ ಸುಚಾರ್ವಂಗಿ ಕ್ಷೀರೋದಮಥನೋದ್ಭವೇ ॥

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಆಚಮನಂ ಸಮರ್ಪಯಾಮಿ ॥

**ಓಂ ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ಪುನಃ । ತತೋ ವಿಷ್ವಙ್ವ್ಯಕ್ರಾ-**

ಮತ್ವಾಶನಾನಶನೇ ಅಭಿ ॥ ೪ ॥

ಓಂ ಕಾಂಸ್ಸ್ಮಿತಾಂ ಹಿರಣ್ಯಪ್ರಾಕಾರಾಮಾರ್ದ್ರಾಂ ಜ್ವಲಂತೀಂ ತೃಪ್ತಾಂ ತರ್ಪಯಂತೀಮ್ ।
ಪದ್ಮೇಸ್ಥಿತಾಂ ಪದ್ಮವರ್ಣಾಂ ತಾಮಿಹೋಪ ಹ್ವಯೇ ಶ್ರಿಯಮ್ ॥ ೪ ॥

ಮಧುಸರ್ಪಿಸ್ಸಮಾಯುಕ್ತಕ್ಷೀರಂ ಲಕ್ಷ್ಮೀರ್ದದಾಮ್ಯಹಮ್ ।
ಸರ್ವೈಶ್ವರ್ಯಕರಂ ದೇವಿ ಮಧುಪರ್ಕಂ ಗೃಹಾಣ ಮೇ ॥

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಮಧುಪರ್ಕಂ ಸಮರ್ಪಯಾಮಿ ॥

ಓಂ ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ । ಸ ಜಾತೋ ಅತ್ಯರಿಚ್ಯತ
ಪಶ್ಚಾದ್ಭೂಮಿಮಥೋ ಪುರಃ ॥ ೫ ॥

ಓಂ ಚಂದ್ರಾಂ ಪ್ರಭಾಸಾಂ ಯಶಸಾ ಜ್ವಲಂತೀಂ ಶ್ರಿಯಂ ಲೋಕೇ ದೇವಜುಷ್ಟಾಮುದಾರಾಮ್ ।
ತಾಂ ಪದ್ಮಿನೀಮೀಂ ಶರಣಮಹಂ ಪ್ರ ಪದ್ಯೇಽಲಕ್ಷ್ಮೀರ್ಮೇ ನಶ್ಯತಾಂ ತ್ವಾಂ ವೃಣೇ ॥ ೫ ॥

ವಿಷ್ಣು ವಕ್ಷಸ್ಥಿತೇ ಲಕ್ಷ್ಮೀ ಪರಿಪೂರ್ಣಮನೋರಥೇ ।
ಪುನರಾಚಮನಂ ದೇವಿ ಗೃಹಾಣ ವರದೋಭವ ॥॥

ಪುನರಾಚಮನಂ ಸಮರ್ಪಯಾಮಿ ॥

ಆಪ್ಯಾಯಸ್ವೇತ್ಯಾದಿ ಮಂತ್ರೈಃ ಪಂಚಾಮೃತಂ ॥

ಗಂಗೋದಕಂ ಸಮಾನೀತಂ ಕ್ಷೀರಂ ದಧಿ ಘೃತಂ ಮಧು ।
ಶರ್ಕರಾಫಲಸಂಯುಕ್ತಂ ಸ್ನಾನಂ ಸ್ವೀಕುರು ಮಂಗಲೇ ॥

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಪಂಚಾಮೃತಸ್ನಾನಂ ಸಮರ್ಪಯಾಮಿ ॥

ಓಂ ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ । ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ
ಇಧ್ಮಃ ಶರದ್ಧವಿಃ ॥ ೬ ॥

ಓಮ್ ಆದಿತ್ಯವರ್ಣೇ ತಪಸೋಽಧಿಜಾತೋ ವನಸ್ಪತಿಸ್ತವ ವೃಕ್ಷೋಽಥ ಬಿಲ್ವಃ । ತಸ್ಯ ಫಲಾನಿ
ತಪಸಾ ನುದಂತು ಮಾ ಯಾಂತರಾ ಯಾಶ್ಚ ಬಾಹ್ಯಾ ಅಲಕ್ಷ್ಮೀಃ ॥ ೬ ॥

ಸ್ನಾನಂ ಕುರು ಮಹಾಲಕ್ಷ್ಮೀಃ ಅಮೃತೋದಧಿಸಂಭವೇ ।
ಐರಾವತಾದಿಹಸ್ತಾಭ್ಯಾಂ ಆನೀತೈಶ್ಚ ಶುಭೈರ್ಜಲೈಃ ॥

[ಆಪೋಹಿಷ್ಠೇತ್ಯಾದಿಮಂತ್ರಾಶ್ಚ ಪಠನೀಯಾಃ] ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥

**ಓಂ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ಪುರುಷಂ ಜಾತಮಗ್ರತಃ । ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ೭ ॥**

**ಓಮ್ ಉಪೈತು ಮಾಂ ದೇವಸಖಃ ಕೀರ್ತಿಶ್ಚ ಮಣಿನಾ ಸಹ । ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್ ಕೀರ್ತಿಮೃದ್ಧಿಂ ದದಾತು ಮೇ ॥ ೭ ॥**

**ಹೇಮವಸ್ತ್ರಂ ಸಮಾದೇಯಂ ಹೇಮಕಂಚುಕಸಂಯುತಮ್ ।**
**ಗೃಹಾಣೇದಂ ಮಹಾಲಕ್ಷ್ಮೀನಾರಾಯಣ ನಮೋಽಸ್ತುತೇ ॥**

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ವಸ್ತ್ರಂ ಸಮರ್ಪಯಾಮಿ ॥

**ಓಂ ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಮ್ । ಪಶೂಂತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ಗ್ರಾಮ್ಯಾಶ್ಚ ಯೇ ॥ ೮ ॥**

**ಓಂ ಕ್ಷುತ್ಪಿಪಾಸಾಮಲಾಂ ಜ್ಯೇಷ್ಠಾಮಲಕ್ಷ್ಮೀಂ ನಾಶಯಾಮ್ಯಹಮ್ । ಅಭೂತಿಮಸಮೃದ್ಧಿಂ ಚ ಸರ್ವಾಂ ನಿರ್ಣುದ ಮೇ ಗೃಹಾತ್ ॥ ೮ ॥**

**ದಿವ್ಯವಸ್ತ್ರ ಪರೀಧಾನೇ ದಿವ್ಯಾಭರಣಭೂಷಿತೇ ।**
**ಜನನೀಂ ಸರ್ವದೇವಾನಾಂ ಭೂಷಣೈಃ ಅರ್ಚಯಾಮ್ಯಹಮ್ ॥**

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಆಭರಣಂ ಸಮರ್ಪಯಾಮಿ ॥

**ಓಂ ತಸ್ಮಾದ್ಯಜ್ಞಾತ್ಸರ್ವಹುತ ಋಚಃ ಸಾಮಾನಿ ಜಜ್ಞಿರೇ । ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥ ೯ ॥**

**ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ॥ ೯ ॥**

**ರಾಜತಂ ಬ್ರಹ್ಮಸೂತ್ರಂ ಚ ಕಾಂಚನಂ ಚೋಪವೀತರಮ್ ।**
**ಗೃಹಾಣೇದಂ ಜಗನ್ನಾಥೇ ಮಹಾಲಕ್ಷ್ಮೀರ್ನಮೋಽಸ್ತು ತೇ ।**

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಉಪವೀತಂ ಸಮರ್ಪಯಾಮಿ ॥

**ಓಂ ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ । ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ**

ಅಜಾವಯಃ ॥ ೧೦ ॥

ಓಂ ಮನಸಃ ಕಾಮಮಾಕೂತಿಂ ವಾಚಃ ಸತ್ಯಮಶೀಮಹಿ । ಪಶೂನಾಂ ರೂಪಮನ್ನಸ್ಯ ಮಯಿ ಶ್ರೀಃಶ್ರಯತಾಂ ಯಶಃ ॥ ೧೦ ॥

ಭಕ್ತವಿಘ್ನೋಪಶಮನೀಂ ತಪ್ತಕಾಂಚನಸನ್ನಿಭಾಮ್ ।
ಲೋಕರಕ್ಷಾಕರೀಂ ಮಾಯಾಮಾಸನೇ ವಿನಿಯೋಜಯೇ ॥

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಆಸನಂ ಸಮರ್ಪಯಾಮಿ ।

ಓಂ ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ । ಮುಖಂ ಕಿಮಸ್ಯ ಕೌ ಬಾಹೂ । ಕಾ ಊರೂ ಪಾದಾ ಉಚ್ಯೇತೇ ॥ ೧೧ ॥

ಓಂ ಕರ್ದಮೇನ ಪ್ರಜಾ ಭೂತಾ ಮಯಿ ಸಂಭವ ಕರ್ದಮ । ಶ್ರಿಯಂ ವಾಸಯ ಮೇ ಕುಲೇ ಮಾತರಂ ಪದ್ಮಮಾಲಿನೀಮ್ ॥ ೧೧ ॥

ಚಂದನಾಗರುಕಸ್ತೂರೀಕುಂಕುಮೇನ ವಿರಾಜಿತಮ್ ।
ಶ್ರೀಚಂದನಂ ಗೃಹಾಣೇದಂ ಸುರಪೂಜ್ಯೇ ನಮೋಽಸ್ತುತೇ ॥

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಗಂಧಂ ಸಮರ್ಪಯಾಮಿ ॥

ಶಾಲೀಯಾನ್ ಅಕ್ಷತಾನ್ ಶ್ವೇತಾನ್ ಚಂದ್ರಾಭಾನ್ ವಿಮಲಾನ್ ಶುಭಾನ್ ।
ಗೃಹಾಣ ಫಲದೇ ದೇವೀ ಭಕ್ತಾಭೀಷ್ಟಪ್ರದಾಯಿನಿ ।

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಅಕ್ಷತಾನ್ ಸಮರ್ಪಯಾಮಿ ॥

ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ । ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥ ೧೨ ॥

ಆಪಃ ಸೃಜಂತು ಸ್ನಿಗ್ಧಾನಿ ಚಿಕ್ಲೀತ ವಸ ಮೇ ಗೃಹೇ । ನಿ ಚ ದೇವೀಂ ಮಾತರಂ ಶ್ರಿಯಂ ವಾಸಯ ಮೇ ಕುಲೇ ॥ ೧೨ ॥

ಜಾತೀಕೇತಕಿಕಲ್ಹಾರೈಃ ಚಂಪಕಾಮಲ್ಲಿಕಾದಿಭಿಃ ।
ಪುಷ್ಪೈಃ ಪೂಜಾಂ ಕರೋಮ್ಯಾಶು ವರದೇ ಭಕ್ತವತ್ಸಲೇ ॥

ಶ್ರೀಲಕ್ಷ್ಮೀನಾರಾಯಣಾಭ್ಯಾಂ ನಮಃ । ಪುಷ್ಪಾಣಿ ಸಮರ್ಪಯಾಮಿ ॥

ಯಾ ಸುಗಂಧಾಸ್ಯನಾಸಾದಿಸವದ್ವಾರಾಽಖಿಲೇನ ಯಾ ।
ದುರಾಧರ್ಷಾ ಸರ್ವಸಸ್ಯೋದಯಾರ್ಥಂ ಯಾ ಕರೀಷಿಣೀ ॥ ೧ ॥

ಯಾ ನಿತ್ಯಪುಷ್ಟಾ ಸರ್ವಾಂಗೈಃ ಸೌಂದರ್ಯಾದಿಗುಣೈರಪಿ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ॥ ೨ ॥

ಮಾತರ್ಲಕ್ಷ್ಮಿ ನಮಸ್ತುಭ್ಯಂ ಮಾಧವಪ್ರಿಯಮಾನಿನಿ ।
ಯುವಾಂ ವಿಶ್ವಸ್ಯ ಪಿತರೌ ಇತರೇತರಯೋಗಿನೌ ॥ ೩ ॥

ಸಮನಾ ಕಿಲ ಮಾತಸ್ತ್ವಮಮುನಾ ತತಯೋಗಿನೀ ।
ಮಮ ನಾಥೇನ ದೇವಶ್ಚ ವಿಮನಾಶ್ಚ ನ ಸ ತ್ವಯಿ ॥ ೪ ॥

ತ್ವಂ ವೇದಮಾನಿನೀ ವೇದವೇದ್ಯಃ ಕಿಲ ಸ ತೇ ಪ್ರಿಯ : ।
ತ್ವಂ ಮೂಲಪ್ರಕೃತಿರ್ದೇವೀ ಸ ಚಾದಿಪುರುಷಃ ಕಿಲ ॥ ೫ ॥

ಯಸ್ತ್ವಾಮುರಸಿ ಧತ್ತೇಂಽಬ ಕೌಸ್ತುಭದ್ಯುತಿಭಾಸಿತೇ ।
ಸ ತ್ವಾಂ ನೈವಾಚ್ಯುತಃ ಸರ್ವಸ್ಯಾತ್ಯಯೇ ಸತ್ಯಪಿ ತ್ಯಜೇತ್ ॥ ೬ ॥

ದೇವಿ ತ್ವಂ ಲಲನಾರತ್ನಂ ದೇವೋಽಸೌ ಪುರುಷೋತ್ತಮಃ ।
ಯುವಾಂ ಯಾವಾನೌ ಸತತಂ ಯುವಯೋರ್ನ ವಯೋಽಧಿಕಃ ॥ ೭ ॥

ತ್ವಂ ಪದ್ಮಿನೀ ಪದ್ಮವಕ್ತ್ರಾ ಪದ್ಮಾಕ್ಷೀ ಪದ್ಮವಿಷ್ಟರಾ ।
ಪದ್ಮದ್ವಯಧರಾ ಪದ್ಮಕೋಶೋದ್ಯತ್‌ಸ್ತನಶೋಭನಾ ॥ ೮ ॥

ಪದ್ಮಹಸ್ತಾ ಪದ್ಮಪಾದಾ ಪದ್ಮನಾಭಮನಃಪ್ರಿಯಾ ।
ಪದ್ಮೋದ್ಭವಸ್ಯ ಜನನೀ ಪದ್ಮಾ ಚ ವರವರ್ಣಿನೀ ॥ ೯ ॥

ಅಂಬಾಂ ಪೀತಾಂಬರಶ್ರೋಣೀಂ ಲಂಬಾಲಕಲಸನ್ಮುಖೀಮ್ ।
ಬಿಂಬಾಧರೋಷ್ಠೀಂ ಕಸ್ತೂರೀಜಂಬಾಲತಿಲಕಾಂ ಭಜೇ ॥ ೧೦ ॥

ರತ್ನೋದ್ದೀಪ್ತಸುಮಾಂಗಲ್ಯಸೂತ್ರಾವೃತಶಿರೋಧರಾಮ್ ।
ಕುಂಡಲಪ್ರಭಯೋದ್ದಂಡಗಂಡ ಮಂಡಲಮಂಡಿತಾಮ್ ॥ ೧೧ ॥

ಕುಚಕಂಚುಕ ಸಂಚಾರಿಹಾರನಿಷ್ಕಮನೋಹರಾಮ್ ।
ಕಾಂಚೀಕಿಂಕಿಣಿಮಂಜೀರಕಂಕಣಾದ್ಯೈರಲಂಕೃತಾಮ್ ॥ ೧೨ ॥

ಸುವರ್ಣಮಂಡಪೇ ರತ್ನಚಿತ್ರಸಿಂಹಾಸನೋತ್ತಮೇ ।
ನಮಾಮಿ ಹರಿಣಾ ಸಾಕಂ ಇಂದಿರಾಂ ಕೃತಮಂದಿರಾಮ್ ॥ ೧೩ ॥

ಬ್ರಹ್ಮಾದ್ಯಾ ವಿಬುಧಶ್ರೇಷ್ಠಾ ಬ್ರಹ್ಮಾಣ್ಯಾದ್ಯಾಃ ಸುರಾಂಗನಾಃ ।
ಯಾಂ ಪೂಜಯಂತೇ ಸೇವಂತೇ ಸಾ ಮಾಂ ಪಾತು ರಮಾ ಸದಾ ॥ ೧೪ ॥

ಸರ್ವಾಲಂಕಾರಭರಿತೌ ಸರ್ವಜ್ಞೌ ಸರ್ವಸದ್ಗುಣೌ ।
ಶರ್ವಾದಿಸರ್ವಭಕ್ತೌಘಸರ್ವಸರ್ವಸ್ವದಾಯಕೌ ॥ ೧೫ ॥

ಸುಮುಖೌ ಸುಂದರತರೌ ಸುನಾಸೌ ಸುಖಚಿತ್ತನೂ ।
ಸುರಾರಾಧಿತಪಾದಾಬ್ಜೌ ರಮಾನಾರಾಯಣೌ ಸ್ತುಮಃ ॥ ೧೬ ॥

